ಸುವರ್ಣ ಭಾರತಿ ಗ್ರಂಥ ೬.

# ರಾಜ್ಯತೃಷ್ಣೆ.

( ಸರಳರಗಳೆಯ ಐತಿಹಾಸಿಕ ನಾಟಕ ).



ಲೇಖಕರು,

**ಶ್ರೀಕೃಷ್ಣ ಪಾಟೀಲ, ಬೆಳಗಾವಿ.**



**ಸುವರ್ಣ ಭಾರತಿ ಗ್ರಂಥಮಾಲೆ, ಬೆಳಗಾವಿ.**

೧೯೫೧ ] [ ಬೆಲೆ ೦-೧೨-೦

ಪ್ರಕಾಶಕರು,
**ವ. ಭೀ. ಪಾಟೀಲ,**
**ಸುವರ್ಣ ಭಾರತಿ ಗ್ರಂಥಮಾಲೆ,**
**ಬೆಳಗಾವಿ.**



ಸಾಹಿತ್ಯದಲ್ಲಿ ಸಲಹೆಗಾರರು,

**ಶ್ರೀಕೃಷ್ಣ ಪಾಟೀಲ**
**ಶ್ರೀರಾಮ ಪಾಟೀಲ,** ಬಿ. ಎ. ಆನರ್ಸ ಬಿ. ಟಿ.
**ಶ್ರೀ. ಪ್ರಹ್ಲಾದ ಕುಮಾರ ಭಾಗೋಜಿ,** ಎಮ್. ಎ.
**ಸೌ. ಶಮಾದೇವಿ ಪಾಟೀಲ.**



ಮುದ್ರಕರು,
**ಬಿ. ಡಿ. ಚೌಗುಲೆ,**
**ಶ್ರೀಮಹಾವೀರ ಮುದ್ರಣಾಲಯ,**
**ಬೆಳಗಾವಿ**

# ಎರಡು ಮಾತು.



ಈ ರಾಜ್ಯತೃಷ್ಣೆ ಸರಳರಗಳೆಯ ನಾಟಕವನ್ನು ವಿಜಯನಗರದ ಆರು ನೂರು ವರುಷದ ಹುಟ್ಟು ಹಬ್ಬದ ಸಮಯದಲ್ಲಿ—ಅಂದರೆ ಇಂದಿಗೆ ಹದಿನಾರು ವರುಷಗಳ ಹಿಂದೆ—ಬರೆಯಲಾಗಿದ್ದಿತು. ಆಗ ಇಲ್ಲಿಯ ಅರುಣೋದಯ ವಾರ ಪತ್ರಿಕೆಯ ಸಂಪಾದಕರು ಈ ನಾಟಕದಲ್ಲಿಯ ಎರಡನೆಯ ಪ್ರವೇಶವನ್ನು ತಮ್ಮ ವಿಜಯನಗರದ ಸ್ಮಾರಕ ಸಂಚಿಕೆಯಲ್ಲಿ ಮುದ್ರಿಸಿದರು. ಮುಂದೆ ಕಸ—ಧೂಳಿ ತಿನ್ನುತ್ತ ನಾಟಕವು ಹಾಗೆಯೇ ಬಿದ್ದಿದ್ದಿತು. ಈಗ ಸುವರ್ಣ ಭಾರತಿ ಗ್ರಂಥ ಮಾಲೆಯವರು ಬೆಳಕಿಗೆ ತಂದುದಕ್ಕೆ ಉಪಕೃತನು.

ಈ ನಾಟಕದ ವಸ್ತು ವಿಜಯನಗರದ ಸಾಮ್ರಾಜ್ಯದಲ್ಲಿಯ ಒಂದು ಚಿರದುರಂತ ಘಟನೆ. ಈಗಾಗಲೆ ಇದರ ಮೇಲೆ ಕಾದಂಬರಿ, ಕತೆ, ನಾಟಕ ಬರೆದುದುಂಟು. ಅವುಗಳನ್ನು ಓದಿ ಅತ್ತಿರುವೆ, ನೋಡಿ ನೊಂದಿರುವೆ. ಈ ದುಃಖ ಭಾವನೆಯಲ್ಲಿಯೇ ನಾನೂ ಬರೆದಿರುವೆ. ಇನ್ನು ಮುಂದೂ ಯಾರಾದರು ಸಾಹಿತ್ಯ ಕೃತಿಗಳನ್ನು ನಿರ್ಮಿಸಬಹುದು. ಆ ವಸ್ತು ಅಂಥ ಪ್ರೇರಣಾ ಜನಕವಾದುದು.

ಮೂಲ ವಸ್ತುವು ಸಾಕಷ್ಟು ದುಃಖದಾಯಕವಿದ್ದರೂ ನಾನು ಒಂದೆರಡು ಪಾತ್ರಗಳನ್ನು ಕಲ್ಪಿಸಿಕೊಂಡಿರುವೆ. ಅವು ನಾಟಕಕ್ಕೆ ಇನ್ನಷ್ಟು ಬಣ್ಣ ಬಳೆಯಬೇಕೆಂದಲ್ಲ. ನನಗಾದ ದುಃಖದ ತೀವ್ರತೆಯ ದ್ಯೋತಕಕ್ಕಾಗಿ. ಈ ಮಾತನ್ನು ರಸಿಕ ಕನ್ನಡಿಗರಿಗೆ ಹೇಳ ಬಯಸುವೆ. ಐತಿಹಾಸಿಕ ಸಂಶೋಧಕರಿಗಲ್ಲ.

**ಶ್ರೀಕೃಷ್ಣ ಪಾಟೀಲ.**

# ಪ್ರಕಾಶಕರ ಅರಿಕೆ.



ರೆಕ್ಕೆಯ ಕುದುರೆಯ ಓಟದಂತೆ ಜೀವನೋಪಾಯ ವಸ್ತುಗಳ ಬೆಲೆಯು ಬೆಳೆದಂತೆ ಕಾಗದದ ಧಾರಣೆಯೂ ಅಧಿಕವಾಗಿದೆ. ಮೇಲೆ ಮಾಲೆಯವರಿಗೆ ಮುದ್ರಣಾಲಯದ ತೊಂದರೆಯೂ ಉಂಟು. ಜಯಂತ ಕಾದಂಬರಿಯೂ ನಮಗೆ ಅನುಕೂಲ ಸಮಯಕ್ಕೆ ಒದಗಲಿಲ್ಲ. ಒದಗಿದಷ್ಟು ಸಮಯದಲ್ಲಿ ಮುದ್ರಿಸಬೇಕೆಂದರೆ ಅದು ಇನ್ನೂ ದೊಡ್ಡದಾಯಿತು. ಹೀಗಾಗಿ ರಾಜ್ಯತೃಷ್ಣೆಯೆಂಬ ಚಿಕ್ಕ ಹೊತ್ತಿಗೆಯನ್ನು ಕೊಡುತ್ತಿದ್ದೇವೆ. ಪುಸ್ತಕವು ಚಿಕ್ಕದಾದರೂ ಅವರ ಯೋಗ್ಯತೆ ದೊಡ್ಡದಿದೆ ಎಂಬುದನ್ನು ಓದಿದರೆ ತಿಳಿಯಬಹುದು. ಅದು ಏನೇ ಇದ್ದರು ಜಯಂತ ಕಾದಂಬರಿಯನ್ನು ನಮ್ಮ ಉದಾರ ಕನ್ನಡಿಗರಿಗೆ ನಮ್ಮ ಮಾಲೆಯಿಂದ ಕೊಡುವೆವೆಂದು ಭರವಸೆಯನ್ನೀಡ ಬಯಸುವೆವು.

ರಾಜ್ಯತೃಷ್ಣೆ ನಾಟಕವನ್ನು ನಮ್ಮ ಮಾಲೆಗೆ ಮುದ್ರಿಸಲು ಕೊಟ್ಟ ಶ್ರೀಕೃಷ್ಣ ಪಾಟೀಲರಿಗೆ ಧನ್ಯತೆಗಳು.

ಪ್ರಕಾಶಕರು.



# ರಾಜ್ಯತೃಷ್ಣೆ

## ಪ್ರವೇಶ ೧.

( ಅರಮನೆಯಲ್ಲಿ ವೆಂಕಟಪತಿಯು ರುಗ್ಣಶಯ್ಯೆಯ ಮೇಲೆ **ಮಲಗಿರುವನು.** **ಶಾಂತ ವಾತಾವರಣ. ವೆಂಕಟಪತಿಯ ನರಳುವಿಕೆಯು ಆ ಶಾಂತವಾತಾವರಣವನ್ನು ಭೇದಿಸಿಕೊಂಡು ಒಂದು ಬಗೆಯ ಭೀಕರತೆಯನ್ನು ಹುಟ್ಟಿಸುವುದು. ಹೀಗೆಯೇ ಐದಾರು ನಿಮಿಷ ಕಳೆದ ಮೇಲೆ ಅರಸನು ಆಯಾಸದಿಂದ ಹಾಸಿಗೆಯ ಮೇಲೆ ಎದ್ದು ಕುಳಿತು, ಆಳವಾದ ಉಸಿರುಗರೆಯುತ್ತ—**

ವೆಂಕಟಪತಿ:— ಹಾ ! ಪಂಪಾಪತೆ

ಮುಮ್ಮಡಿಯ ಮಾಸೇನೆ ನಮ್ಮ ಧರ್ಮದ ಹಿಂದೆ
ನುಂಗ ಬಂದಿತು ತಂದೆ ಶ್ರೀವಿರೂಪಾಕ್ಷನೆ !
ಭಾರತದ ಬಂಧುಗಳು ಬಾಯ್ಬಿಟ್ಟು ಕಾಪಾಡು
ಎಂಬ ಮೊರೆಯಿಡಲದನು ಕೇಳಿಯೋಡುತ ಬಂದೆ.
—ವೇದವೇದಾಂಗಗಳು ಭಾರತದ ಪುಣ್ಯದಲಿ
ಮೈವೆತ್ತುವೆಂಬಂತೆ, ಕನ್ನಡದ ನಾಡಿನಲಿ
ಮುನಿಗಣಕೆ ಮಣಿಯಾದ, ಕವಿಕುಲಕೆ ಪತಿಯಾದ,
ಯೋಗಿಗಳ ಭೋಗಿಯೋ, ತ್ಯಾಗಿಗಳ ತವುರೂರೊ,
ವಿದ್ಯೆಗದು ವಲ್ಲಭನು, ಶಾಸ್ತ್ರಕದು ಸರ್ವಜ್ಞ,
ಸಿರಿಯೆರೆಯ ಮಾಧವಾಚಾರ್ಯರದು ಮೈದೋರಿ
ಆರ್ಯ ಧರ್ಮದ ಬೆಳಕ ಜಗವೆಲ್ಲ ಹರಡಿದರು.
**ಈ ಜಸವು ನಿನ್ನದಲ್ಲವೆ ತಂದೆ ಪಂಪಾಪತೆ.......!!**

**(ಉಸಿರುಗರೆದು ಬಲಕ್ಕೆ ಒಂದಿಷ್ಟು ಒರಗಿ)**

ಆ ಮುನಿಯು, ಆ ಗುರುವು, ಆ ತ್ಯಾಗಿ, ಆ ಮೂರ್ತಿ
ನೆಟ್ಟಗಿಡವನು ನಾನು ಎಲುವಿನಾ ಪುಡಿಹಾಕಿ

ನೆತ್ತರದ ನೀರೆರೆದು ಕೀರ್ತಿಯಾ ಗಾಳಿಯನು
ಬೀಸಿ ಬೆಳೆಸಿದೆ ತಂದೆ, ಕುಲದೇವ ಪಂಪಾಪತೆ !!
ಪೂರ್ವಜನ್ಮದಿ ನಾನು ಆವ ಸಾಧ್ವಿಯ ಮಗುವ
ಪೀಡಿಸಿದೆನೆಂದೆಯೋ ಮಕ್ಕಳಿಲ್ಲದು ನನಗೆ.
ಲೋಕವೇ ಮಕ್ಕಳೆಂದರಿತಿರುವೆ ಮೋದದಲಿ.
ಮಕ್ಕಳಿಲ್ಲದ ದುಗುಡು ನನಗಿಲ್ಲವೇನು
ಕರ್ನಾಟಕ ಸಿಂಹಾಸನಕೆ ಮಕ್ಕಳ ಸಾಪ
ಇಹುದೆಂದು ಬಗೆದಿರುವೆ ದೇವ ವಿರುಪಾಕ್ಷನೆ !!

( ಆಯಾಸವಾಗಿ ನರಳುತ್ತ )

ನಾನೊಂದು ಎಣಿಸುತ್ತ ಕುಳಿತಿರುವೆ ಮರಣದಲಿ
ಒಳಗೊಂದು ನಡೆದಿಹುದು ಘನಘೋರ ಸಂಗ್ರಾಮ
ದೇವ ದೇವನೆ ! ನೀನು ದಾರಿ ತೋರದ ನಾನು
ಕಣ್ಣು ಮುಚ್ಚಲಿ ಹೇಗೆ ? ಈ ಪವಿತ್ರ ಪೀಠಕ್ಕೆ
ಮಕ್ಕಳಾಟದ ಬೊಂಬೆ–ಆ ಸಾಕು ಮಗುವರಸೆ !!!
ಕಲ್ಪವೃಕ್ಷದ ತುದಿಗೆ ಬೇವು ಮುಗುಳೊಡೆಯುವುದೆ ?
ಜೀವವದು ಕಳವಳಿಸಿ, ಹೃದಯವದು ತಳಮಳಿಸಿ
ಸುಡುತಿಹುದು ತಂದೆಯೋ (ಭಾರವಾದ ಶ್ವಾಸಗಳನ್ನು ಆಡಿಸುತ್ತ)
ಅದು ನನ್ನ ಮಗುವಲ್ಲ.

ಮೋಸವನ್ನೆಣಿಸುತ್ತ ಗದ್ದುಗೆಯ ಅವಮಾನ
ಮಾಡುವುದೆ ? ಹೇಗೆ ? ಏನು ಮಾಡುವದಿನ್ನು ! (ಏರುವ ದನಿಯಲ್ಲಿ)
ಹಾ ತವಸಿ ಮಾಧವನೆ, ಹಾ ಯೋಗಿ ಸಾಯಣನೆ
ನಿಮ್ಮ ಮಂತಣವಿಲ್ಲ. ಕಣ್ಣು ಕುಣಿಕೆಯ ಮುಂದೆ
ಕವಿಯುತಿದೆ ಕಾಳಮೆಯು. ಬೆಳಕಿಲ್ಲ. ಬೆಳಕಿಲ್ಲ.
ಮೊರೆಯನ್ನು ಕೇಳವರು ಆರಿಲ್ಲ ಬಳಿಯಲ್ಲಿ. ( ರೋಷದಿಂದ )
ಬಾಯಮ್ಮ, ಸಾಕಿರುವ ತುಡುಗು ನರಿಯನು ಹೊಡೆದು
ಸಿಂಗನನ್ನೇರಿಸುತ ಸಿಂಹಾಸನದ ಮೇಲೆ.

ಸಾಯುವೆನು ಶಾಂತಿಯಲಿ. ಅಷ್ಟು ಮಾಡದೆ ಎನಗೆ
ಸಮೆಯಿಲ್ಲ. ಜೀವನಕೆ ಕೊನೆಯಿಲ್ಲ. ತಡೆಯಾಗಿ
ಕಜ್ಜದಲಿ ವಿಘ್ನವಾದರೆ ನಾನು ರಕ್ಕಸರ
ರೂಪನ್ನು ತಾಳಿಯಾದರು ಪೀಠ ಕಾಯುವೆನು.
ಕರ್ನಾಟ ಪಟ್ಟದಾ ಬೆಳ್ಗಸವನುಳಿಸುವೆನು.
ಇದು ಭೀಷ್ಮಪ್ರತಿಜ್ಞೆ; ತಿಳಮಾತ್ರ ಹುಸಿಯಿಲ್ಲ.

( ಎಂದು ಆವೇಶದಿಂದ ಹಾಸಿಗೆಯನ್ನು ಹೊಡೆಯುವನು.
ಎಚ್ಚಮ, ರಂಗ, ಕೆಲ ಸರದಾರರು ಬರುವರು )

ಎಚ್ಚಮ:—( ಬಳಿಹೋಗಿ ) ಹುಸಿಯಿಲ್ಲದೇನಯ್ಯ ?

ವೆಂಕಟ:—( ಅಧಿಕಾರದಿಂದ ) ಯಾರು ನುಡಿಯುವರಲ್ಲಿ ?

ಎಚ್ಚಮ:—ಅಡಿಗಳನು ಎಡೆಬಿಡದೆ ಕಾಣುತಿಹ ಸೇವಕನು.

ವೆಂಕಟ:—( ಉಸಿರು ದೀರ್ಘವಾಗಿ ಎಳೆದು ) ಎಚ್ಚಮನೆ ?

ಎಚ್ಚಮ:— ಆಹುದು ದೊರೆ. ಬೆಸನವೇನದು ತಂದೆ ?

ವೆಂಕಟ:—ಏನಿಲ್ಲ. ( ನಿದಾನಿಸಿ ) ರಣರಂಗ ಬಂದಿಹನೆ?

ಎಚ್ಚಮ:— ಅಹುದಹುದು.

ರಂಗ:—( ಮುಂದಾಗಿ ಬಂದು ) ನಮಿಸುವೆನು ತಾತ ( ನಮಿಸುವನು )

ಉಳಿದವರು:—( ನಮಿಸುತ್ತ ) ನಮಿಸುವೆವು ದೇವ

ವೆಂಕಟ:—( ಎಬ್ಬಿಸುತ್ತ ) ಏಳೇಳು ಮಗುವೆ ಮೇಲೆಬಾ, ಇಲ್ಲಿಬಾ
ಬಳಿಗೆ ಬಾ, ಎದೆಗೆ ಬಾ ಬಿಗಿಯಾದ ಅಪ್ಪುಗೆಯ
ನನಗೊಮ್ಮೆ ಕುಡಲು ಬಾ, ಮೇಲೆ ಬಾ ರಂಗಣ್ಣ.
( ರಂಗನು ಮೇಲೆ ಬರುವನು. ಅವನನ್ನು ಕೆಲ ಹೊತ್ತು ಅಪ್ಪಿಕೊಂಡು )
ಸುಡುತಿರುವ ಎದೆಯಿಂದು ಶಾಂತವಾಯಿತು ಮಗುವೆ.
( ನಾಯಕರನ್ನು ನೋಡಿ ) ನಾಯಕರೆ, ಮರಣದಲಿ ಹುರುಳುಂಟು
ಹೆದರಿಲ್ಲ.

—ರಾಜ್ಯತೃಷ್ಣೆ

ಹೆದರಿಲ್ಲ. ಈಗ ಬರಲಾಗಬರಲಿಂದೆ ಬರಲಿ.
ವ್ಯವಹಾರದಿಂದೊಮ್ಮೆ ದಾಟುವುದೆ ಮರಣ.
ಮರಣಕ್ಕೆ ಹೆದರುವನು ಹುಟ್ಟುವುದು ವ್ಯರ್ಥ.
ಹುಟ್ಟುವುದು ಸವಿಯೆಷ್ಟೊ ಸಾಯುವುದು ಅಷ್ಟೆ ಸವಿ.
ಇರಲಿರಲಿ. ಎಚ್ಚಮನೆ, ಮುಂದಿರುವ ಘನ ಕಾರ್ಯ
ಆವುದೆಂಬುದ ನೀವು ಅರಿತಿಲ್ಲವೇನು ( ಮೆಲ್ಲಗೆ )
ಪಂಪಾಪತಿಯ ಸೇವೆಯನು ನಾನು ಮಾಡುವುದು
ಈಸೆಂದು ಬರೆದಂತೆ ಕಾಣುವುದು ಹಣೆಯಲ್ಲಿ.
ಈ ಲೋಕದಾಸೆಯನು ಮರೆಯುವುದು ಒಳಿತೆಂದು
ಮೈಗೆ ಹತ್ತಿದ ಬೇನೆ ಕನಸಿನಲಿ ಹೇಳುತಿದೆ.
ಇನ್ನೆರಡು ದಿನಗಳಲಿ ಆಲೋಕ ಸೇರುವೆನು.

( ಎಚ್ಚಮನು, ಮತ್ತು ಉಳಿದವರು ಬೆದರುವರು )

ನಾಯಕರೆ, ಬೆದರದಿರಿ. ಅಳುಕದಿರಿ. ನೀವೆಯೇ
ಕೈಕಾಲು ಕೆಡೆದರೆ ಮಿಕ್ಕವರು ಏನೆಂದು
ಮಿಡುಕುವುದು ? ಸಾವೊಂದು ಕೊನೆಯಲ್ಲ. ಜನನವೇ
ಮೊದಲಲ್ಲ. ಅಲ್ಲಿಲ್ಲಿ ಹೋಗುಬರು ದಾರಿಗಳು.
ಜಗದೊಳಗೆ ಜೀವಿಗಳು ಬದುಕಿ ಬಾಳುವವರೆಗೆ
ಇರುತಿಹುದು ಸಂಬಂಧ. ( ಮೈಯನ್ನು ಅಲುಕಾಡಿಸಿ )

ಹಾ ! ನೋವು ಬಲಿಯುತಿದೆ.

ಕೇಳಿ ಸರದಾರರೇ ! ರಂಗನದು ಯುವರಾಜ.

( ರಂಗನು ತಳಿಗೆ ಕೈಹಿಡಿದುಕೊಳ್ಳುವನು )

ಈ ಹಿಂದೆ ಈಗಾದೆ ಕಾಯ್ದಂತೆ ಮುಂದೆಯೂ
ಕಾಯುವುದು. ಇವ ನಿಮ್ಮ ಚಿಕ್ಕದೊರೆ. ನನ್ನನ್ನು
ನನ್ನಿಯಿಂ, ನೇಹದಿಂ ಕಂಡಂತೆ ಕಾಣುವುದು.
ಇದು ನಿಮ್ಮ ಧರ್ಮವದು ನಿಮ್ಮ ಕೀರ್ತಿ-ಎಚ್ಚಮ,
ಮನದೊಳಗೆ ಗುಣಿಸುತಿಹ ಗಹನವೇನದು ತಿಳಿಸು ?

ಎಚ್ಚಮ:—( ನ್ಯೆಜಾಡಿಸಿ ) ಏನಿಲ್ಲ ದೊರೆಯೆ.

ವೆಂಕಟ:— ಬೈತಿಡದೆ ಹೇಳು.

ಎಚ್ಚಮಃ—ನಿಮಗೆ ಹೇಳದ ಗಹನವದುವಿಲ್ಲ ತಂದೆ.
ಆವುದನೊ, ಜೀವವದು ಬಗೆಯುತ್ತ ಕುಳಿತಿತ್ತು.
ಮನದೊಳಗೆ ಮೂಡಿದುದು ಒಂದು ಭೀಕರ ಚಿತ್ರ,
ಆ ಚಿತ್ರವನು ಬಿಡದೆ ನೋಡುತಿದ್ದೆನು ರಾಯ.

ವೆಂಕಟಃ—( ಆತುರದಿಂದ ) ಯಾವುದದು ಚಿತ್ರ ?

ಉಳಿದವರುಃ— ಯಾವುದದು ನಾಯಕರೆ ?

ಎಚ್ಚಮಃ—ದೇವ ಗಂಗೆಯ ದಡದ ಮೇಲೊಬ್ಬ ತವಸಿಯು
ದೇವನನು ಕಾಣಲ್ಕೆ ತಪನನಾಚರಿಸಿದ್ದ.
ಹನ್ನೆರಡು ಬರಿಸಗಳು ಸಂದಿದುವು. ಕಡೆಗೊಮ್ಮೆ
ದೇವನದು ಬಂದು "ಏಳು, ಏಳೆಲೆ ಮಗುವೆ.
ಮಳೆ ಬಿಸಿಲು ಚಳಿಯಿರುಳು ಪಗಲುಗಳ ಗಣಿಸದಲೆ
ಇಷ್ಟುಗ್ರ ರೀತಿಯಲಿ ಕರೆದ ಕಾರಣವೇನು ? "
ಎಂದು ಕೇಳಲು, ತವಸಿ ಪುರುಷಾರ್ಥ ಬೇಡಿದನು.
ದೇವನದು ಕುಡುವುದಕೆ ಕೈಮುಂದೆ ಮಾಡಿದನು.
ಬಳಿಯಲ್ಲಿ ನಿಂದಿರುವ ಖೂಳ ಮಾನವನೊಬ್ಬ
ತನ್ನ ಕೈಯನು ಚಾಚಿ ಸೆಳೆಯ ಬಯಸಿದ ವರವ
ದೇವನದು ಕಣ್ದೆರೆದು ನೋಡಿದನು ಹುಳುವನ್ನು
ಸುಟ್ಟು ಹಾರಿತು ಬೂದಿ. ತಾಪಸನು ವರಪಡೆದು
ದೇವನನು ಮನದಣಿಯೆ ಕೊಂಡಾಡಿ, ಜೀವನದ
ಸಾರ್ಥಕತೆ ನೆನೆಯುತ್ತ ಮರಳಿ ನಡೆದನು ಮನೆಗೆ.
ಈ ದಿವ್ಯ ಚಿತ್ರವನು ನೋಡುತಿದ್ದುದು ಮೆಚ್ಚಿ !

ವೆಂಕಟಃ—ಮುಂದಾಗ ಬಂದಿರುವ ಚಿತ್ರವನು ಕಂಡೆಯ ?

—ರಾಜ್ಯತೃಷ್ಣೆ

ಎಚ್ಚಮನೆ ಆ ತವಸಿ ನೀನೆಂದು ಕರೆಯುವೆನು.
ಕನ್ನಡದ ಕೀರ್ತಿಯನು, ಕನ್ನಡದ್ದ ವೈಭವವ
ನಿನ್ನನುಳಿದಿನ್ನಾರು ಕಾಯುವರು ಹೇಳು ? (ಸರದಾರರನ್ನು ನೋಡಿ)
ಕನ್ನಡದ ವೀರರೇ ! ಕೆಚ್ಚೆದೆಯ ಕಲಿಗಳೇ !
ನಾಡಗುಡಿ ನೆರಳಿನಲಿ, ನೆತ್ತರದ ಹೊನಲಿನಲಿ,
ತಲೆಬುರುಡಿಗಳ ತೊಳೆದು, ವಜ್ಜೆಯಾ ಮೊಸರಿನಲಿ
ಸರಿ ಬೆರಸಿ ಕಾಳಗದ ತಟ್ಟೆಯಲಿ ಒತ್ತಿಟ್ಟು
ಚಾಮುಂಡಿ ಮುಂದಿಟ್ಟು ನೈವೇದ್ಯವನು ತೋರಿ
ಹೆಚ್ಚಳದ ಆರುತಿಯ ಬೆಳಗಿಸಿದ ಬೀರರೇ

(ಉಬ್ಬಸವನ್ನು ಅರಿಸಲಿಕ್ಕೆ ಸಾಲ್ಕಾರು ಶ್ವಾಸಗಳನ್ನು, ಸುಮ್ಮನಿದ್ದು, ಎಳೆದುಕೊಂಡು)
ಕಿವಿಗೊಟ್ಟು ಲಾಲಿಸಿರಿ. ರಂಗನದು ಯುವರಾಜ

(ರಂಗನು ಮುಖ ಸಪ್ಪಗೆ ಮಾಡುವನು.)

ಕರ್ನಾಟಕ ಸಿಂಹಾಸನಕೆ ಯೋಗ್ಯನು ರಂಗ. (ರಂಗನ ಕಡೆಗೆ ಕೈಮಾಡಿ)
ಮೇಲೆ ಬಾ ಯುವರಾಜ. ನೀನು ಕನ್ನಡ ರಾಜ.
ಹೆದರದಿರು, ಹಿಂಚದಿರು. ಮೊಗದ ಕಳೆಯನು ತೆಗೆದು
ಬಾಡಿರುವಿಯೇಕೆ ?........ಕನ್ನಡದ ರಾಜರಿಗೆ ಕಳೆ-
ಹೀನ, ದುಗುಡ, ದುರ್ಬಲ, ದುಕ್ಕದುರಿ, ತೆಗಳುವಿಕೆ
ಕನಸು ನೆನಸಲಿ ಕೂಡ ಕಂಡು ಕೇಳರು ನಿಜದಿ.
ಕನ್ನಡದ ಕುಲಕಿಂದು ನೀನೊಂದು ರನ್ನಮಣಿ.
ಕರ್ನಾಟ ರಾಜಪೀಠಕೆ ನೀನು ಚಂದ್ರಮನು
ರಾಜರಾಜರ ಅಂತರಂಗವರಿತಿಹ ರಂಗ
ಮೇಲೆ ಬಾ ಮಗುವೇ.... ಏರಿ ಬಾ ದೊರೆಯೇ
ಕನ್ನಡದ ಕೀರ್ತಿಯೇ ನೀನೆಂದು ತಿಳಿದಿರುವೆ.(ಸರದಾರರಕಡೆಗೆಕೈಮಾಡಿ)
ಇವರುಗಳು ಎಡಬಲದ ಭುಜದಂಡ ಗಂಡಗಳು
ಇವರನೇ ನಂಬಿ ನೀ ನಡೆಯುವುದು ರಂಗ (ಹಾ ಎಂದು ನರಳುತ್ತ...)
ಪಡುಗಡಲ ತಡೆಯನ್ನು ಸೇರುವನು ನೇಸರನು.

ಮರುದಿವಸ ಮುನ್ನೊಬ್ಬ ಮೂಡಣದ ಕೋಡಿಯ-
ಗಲ್ಲ ಸೇರುವನೆಂದು ಜಗವಿಂತು ನಂಬಿಹುದು.
ನಾನೇರಿ ಕುಳಿತಿಹೆನು ಪಶ್ಚಿಮಾಚಲವನ್ನು
ನಾಳೆ ಮೂಡುವ ರವಿಯು ನೀನಲ್ಲವೇ ಚಿನ್ನ?
ಶೂರ ಸರದಾರರೇ, ಪ್ರತಿಜ್ಞೆಯನುಕೊಳ್ಳಿ.
"ಕರ್ನಾಟ ಸಿಂಹಾಸನದ ಸಾಕ್ಷಿಯು ತಳೆದು
ಕಾಯುವೆವು. ಮೈಯೊಳಗೆ ಹಸಿರಕ್ತವುಳಿದರೂ
ವೈರಿಗಳ ಹುಟ್ಟುಗಳ ಕಟ್ಟಿಯೊಟ್ಟುವೆವೆ" ಎಂದು
ಆಜ್ಞೆಯನು ಸ್ವೀಕರಿಸಿ. ಆ ಮುಂದೆ ನನಗೆ
ಮರಣದಲಿ ಶಾಂತಿಯಿದೆ ಸೌಖ್ಯವಿದೆ

ಸರದಾರರು:—( ಖಡ್ಗಗಳನ್ನು ಮುಟ್ಟಿ ) ತೆಗೆದುಕೊಂ-
ಡೆವು ತಂದೆ. ಮೈಯೊಳಗೆ ಕಿಡಿಗಾವು ಉಳಿದರೂ
ಹೆಣಗುವೆವು. ಹೋರುವೆವು ಇದೆ ಕೊನೆಯದೆಂದು ಬಗೆ
ಕನ್ನಡದ ಕಲಿತನವನೆತ್ತಿ ಬೆಳಗಿದ ದೊರೆಯೆ,
ತೊಟ್ಟಿರುವ ಆಣತಿಗೆ ತಿಳಮಾತ್ರ ಕುಂದಿಲ್ಲ.
ಮೀರಿನಡೆದವಗಿಂತು ಅಂಧಕಾರವಾಗಲಿ.
ಇದುವೆಮ್ಮ ಪ್ರತಿಜ್ಞೆ. ಇದುವೆಮ್ಮ ಪ್ರತಿಜ್ಞೆ.

ವೆಂಕಟ:—( ಹಗುರಾದವನಂತೆ ) ಓಹೋ.... ಮರಣವದು ಬಲ್ಲೆನು
ಬಲು ಸವಿಯು.

ಈ ಮರಣ ಮಿಕ್ಕವರ ಮೂಸರೆಂದರಿತಿರುವೆ....
ಈ ಗಾದೆ ಯೋಗ್ಯರಿಗೆ ಸೇರುವನಕೆಚ್ಚುವನೆ,
ಮರಣವಿರಲಿಲ್ಲೆನಗೆ. ಬೇನೆ ಬಾಯ್ದವಡೆಯಲಿ
ಸಿಕ್ಕು ಚಡಪಡಿಸುತ್ತ, ಬಿಸಿಯುಸಿರು ಗರೆಯುತ್ತ,
ನರಳುತ್ತ, ಕೆರಳುತ್ತ ಸಾವಿನಾದಾರಿಯನು
ನೋಡುತ್ತ ಬಿದ್ದಿದ್ದೆ. ಬದುಕಿ ಬಾಳುವ ಬಯಕೆ

ಎಳ್ಳನಿತುವೆನಗಿಲ್ಲ. ಜೀವನದ ತಿಳಿಗೊಳಲ-
ದೊಳಗೊಂದು ಕಮಲವದು ಬಿರಿದು ನಲಿಯುತಲಿಹುದು.
ಕಜ್ಜದಾರಡಿ ರಾಸಿ ಹಾರಾಡಿ ಮಕರಂದ
ಸೇವಿಸಿತು. ಬರಿಯಾದ ಭಾಗವದು ನಿರ್ಮ್ಮಾಜ್ಞೆ
ತುಂಬಿಹುದು....ಎಚ್ಚಮನೆ ಹೇಳುವದು ಬಹಳೇನು!
ಎಲ್ಲವನು ನೀಬಲ್ಲೆ. ( ರಂಗನಿಗೆ ) ಮೇಲೆ ಬಾ ರಂಗದೊರೆ.
ಮಂತ್ರಿವರ, ರಾಜಭೂಷಣ ತೊಡಿಸು. ಬೇಗ ಹಿಡಿ.
ಕಣ್ಣಿಂದೆ ಕವಿಯುತಿದೆ ಕತ್ತಲೆಯ ಕರ್ಮಡವು
ಉಸಿರಿಳಿಯಲೆಡವುತಿದೆ ಕುತ್ತಿಗೆಯ ಕಣಿಕೆಯಲಿ
ರಂಗ ತೊಡು ಅರಸು ತೊಡರುಗಳನ್ನು. ಈಮುದ್ರೆ
ಮೊದಲು ಹಿಡಿ. ( ಎಚ್ಚಮನು ಕೊಡಹೋಗುವನು )

ರಂಗ:—( ಭಯದಿಂದ ನಡುಗುತ್ತ ) ತಾತನೇ! ನಾನೊಲ್ಲೆ.

ಎಲ್ಲರು:—( ಬೆರಗಾಗಿ ) ........ಬೇಡೆಂದು!

ವೆಂಕಟ:—( ಅತ್ಯಾಶ್ಚರ್ಯದಿಂದ ) ಏನೇನು? ನೀನೊಲ್ಲೆ!! ಅರಸುತ್ತ ಸಿರಿವೆಣ್ಣು
ಮನೆಗೆ ಬರಲದು ದೂಡಿ ಹೊರಗೆ ನೂಕುತಲಿರುವಿ.
ತಪಕೆ ಕೂಡುವ ಮೊದಲೆ ದೇವಿಯೇ ವರಗಳನು
ನೀಡಬರಲದು ಬೈದು ದೂಡುವರೆ ಆಹಾ!?

ಎಚ್ಚಮ:—ಎಳದೊರೆಯೆ! ಏನು ಬೆಸನವು ನಿಮಗೆ ತಿಳಿಸುವುದು?

ವೆಂಕಟ:—( ತೀರ ಆಯಾಸದಿಂದ ) ಏನು ಮಗು?

ರಂಗ:—( ತಡವರಿಸುತ್ತ ) ಏನು ಹೇಳಲಿ ತಾತ! ಹೇಳಲಾ—
ರದ ಬೆತೆಯು ಬೈತುಂಟು. ಜೀವವದು ಬೇಡೆಂದು
ಬಾಯ್ದೆರೆದು ನುಡಿಯುತಿದೆ. ನಡುಗುತಿದೆ ಒಳಗಿಂದ.
'ಮುದ್ರೆಯನು ಹಿಡಿ'ಯೆಂಬ ನಿಮ್ಮ ನುಡಿಗೇಳುತಲೆ
ಕಾದರಸ ಹರಿದಂತೆ ಭಾಸವಾಯಿತು ಕಿವಿಗೆ.

ಎಣಿಸಲಾರದ ಭಯವು ಮನವನಾವರಿಸುತ್ತ
ಬೇಡೆಂದು ಬಿಕ್ಕುತಿದೆ. ಬೇಡ ಬೇಡೈ ತಂದೆ.

ವೆಂಕಟ:—( ತೇಲುತ್ತ ) ಚಿಕ್ಕದೊರೆ, ನೀನಿಲ್ಲದಿನ್ನಾರು ತಳಿಯುವದು
ಈ ತೊಡವು ? ಮುನಿ ಕೊರೆದ ಪೀಠಕ್ಕೆ ಮತ್ತಾರು
ಕೂರುವುದು ! ಪಾವಿತ್ರ್ಯ ಹಳಚದಲೆ ಕಾಪಿಡುತ
ಬಂದಿಹೆವು. ಮುಂದಿನೀ ಭಾರ ನಿನ್ನದು ರಂಗ ( ಸರದಾರರನ್ನು
ತೋರಿಸುತ್ತ ) ಈ ಶೂರ ಗಣವೆಲ್ಲ ನಿನ್ನನೇ ನಂಬಿಹುದು.
ಹೇಡಿಗಳ ಹುಡಿಯನ್ನು ಹಾರಿಸುವ ಕಲಿಯೆಂದು
ವಿಶ್ವಾಸವಿಟ್ಟಿಹುದು. ಮೃತ್ಯುವಿನ ಗಾಳದಲಿ
ಸಿಕ್ಕು ಸವೆಯುತಲಿರುವ ನನ್ನ ಜೀವವು ಕೂಡ
"ನಿನ್ನನೇರಿಸು" ಎಂದು ಹೇಳುವುದು. ಮುದ್ದು ಮಗು,
ಮನದ ಬೇಗುದಿ ಬಿಸುಡಿ; ಅರಸು ತೊಡವನು ಧರಿಸು.

ಎಚ್ಚಮ:—ರಾಯರಾಡಿದ ನುಡಿಯು ಪಂಪಾಪತಿಯ ಮಾತು.
ಸಾವೆಂಬ ಹಾವೊಂದು ರಾಯರನು ನುಂಗಲ್ಕೆ
ಹೊಂಚಿ ಕುಳಿತಿದೆ ರಾಯ. ಕೊನೆಯ ಬಾಣಿಯ ಕೇಳು.
ನಂಬಿನಡೆ ಮಾತಿನಲಿ. ಆವರಂತರಂಗದಲಿ
ಕನ್ನಡದ ಪುಣ್ಯವೇ ಮೊಳೆದೋರಿ ನುಡಿಯುತಿದೆ
ನಿನ್ನನೇ ಹಂಬಲಿಸಿ, ಹಾತೊರೆದು ಕೂಗುತಿದೆ
ಏಳೇಳು ದೊರೆಯೇ ! ಬೆದರಿಕೆಯ ಬೀಸಾಡಿ,
ರಾಜಮುದ್ರೆಯತೆತ್ತಿ, ಕನ್ನಡದ ಮಾನವನು
ಕಾಯಲದುನೆಗೆದೇಳು. ( ನಂಬಿಕೆಯ ನುಡಿಯಿಂದ )
ವಿಶ್ವಾಸದ ಸೇವಕ
ನಾನಿರಲು ಭಯವೇಕೆ ? ಭಯದ ಬಣಬೆಯ ಸುಡುವೆ.
ಇಲ್ಲಿ ಕುಳಿತಿಹ ರಣದ ಚಂಡಿಗಳು ಹೆಂಗಸರೆ !
ಹೊಸರಾಜ್ಯ ಕಟ್ಟುವರು. ಹಳರಾಜ್ಯ ಮುಕ್ಕುವರು.

— ರಾಜ್ಯತೃಷೆ

ವೈರಿವನ ತೊತ್ತುಳಿದು ತೋಳ್ಬಲದ ಕೀಟೆಯನು
ಮೇರೆಯಲಿ ಮೆರೆಸುವರು. (ರಂಗನ ಮುಖವನ್ನು ನಿರೀಕ್ಷಿಸಿ)
ಮುಂದಾಗ ಬಂದಿರುವ
ಭಯಕೆ ನಾವ್ ಬಲಿಯಾಗಿ ನಿಲ್ಲುವೆವು ದೊರೆಯೇ.
ಈ ಮುದ್ರೆ, ಈ ತೊಡವು, ಈ ದಂಡ, ಈ ಧ್ವಜವ
ತಳೆದು ನೀನೆಮ್ಮಯಾ ಬಯಕೆಯಲಿ ಮುಕ್ಕುರಿದ
ತಿಮಿರವನು ತರಹರಿದು, ಕನ್ನಡದ ನಾಡೆಂಬ
ಮೂಡು ಬೆಟ್ಟದ ಮೇಲೆ ಥಳಥಳಿಸು ರಂಗಪೂರೆ.

ವೆಂಕಟ:—(ಮೆಲ್ಲಗೆ) ರಂಗಣ್ಣ, ಯಾಕಿಂತು ಹಿಂಜರಿವೆ ?

ರಂಗ:— ಎಲೆ ತಾತ,
ನುಡಿಯಲದು ನಾಲಗೆಯು ಅಂಜುತಿವೆ, ಹಿಂಜುತಿದೆ.
ರಾಜಮುದ್ರೆಯ ನೋಡಿ ಮೈ ನಡುಗಿ, ಧಮನಿಯಲಿ
ಕೂಡಿರುವ ಬೆಂಗಾವು ಕಂಗೆಟ್ಟು ಹೋಗುವುದು.
ಎದೆಯ ಗುಂಡಿಗೆ ಕಲ್ಲು ಹೊಡೆದಂತೆ ಸಿಡಿಯುವುದು
ಮೈಯೊಳುವ ಶಕ್ತಿರೂಪ ನೀಳಾದ ನಾಡಿಗಳು
ಸಿಡಿಸಿಡಿದು ಸಾಯುತಿವೆ. ಗಿರ್ರೆಂದು ತಿರುಗುವುದು
ತಲೆಯ ಮೇಲಿನ ಮುಗಿಲು. ಯಾಕಿಂತು ನಡೆಯುವುದೊ
ತಿಳಿಯಲಾರೆನು ತಾತ ! ರಾಜಮುದ್ರೆಯು ಬೇಡ.
ಈ ತೊಡವು, ಈ ದಂಡ ಸಿಂಹಾಸನವನೊಲ್ಲೆ. (ಆವೇಶದಿಂದ)
ಕಾಲಾಳ ಗುಂಪಿನಲಿ ಸೇರುತ್ತ ನಾನೊಬ್ಬ
ವಿಜಯನಗರದ ವಿಜಯ ದುಂದುಭಿಯ ಹೊಡೆಹೊಡೆದು
ನಾಡಗುಡಿ ನಾಡಿನಲಿ ಮೆರೆಸುವೆನು, ಮೆರೆಸುವೆನು.
ಕರ್ನಾಟಕ ಕಲಿಗಳ ಭೀಮ ಬಲವನು ಸಾರಿ
ವೈರಿಯೆದೆಗಳ ಬಗಿದು ರುಂಡಗಳ ರಾಶಿಯನು
ತೂರಾಡಿ, ಕರುಳುಗಳ ಮಂಟಪವನಿರಿಸುತ್ತ,
ಜಸವೆಂಬ ಬಳ್ಳಿಯನು ವಿಸ್ತಟದಿ ಚಿಗಿಸುತ್ತ,

ಕನ್ನಡಿಗರಸಕಳಿದರೆಂಬ ಫಲವನು ತಿನಿಸಿ
ಸವೆಯುವೆನು. ತಂದೆ! ಈ ರಾಜ್ಯ ನಾನೊಲ್ಲೆ.
ಇದುವೆ ನೀ ಮಾಡೆಂದು ಒಳಗೊಳಗೆ ಬೈತಿರುವ
ಆವುದೋ ಅವ್ಯಕ್ತ ವಾಣಿಯದು ನುಡಿಯುವುದು.

( ದೀನತೆಯಿಂದ ಕೈಗಳನ್ನು ಕಟ್ಟಿ )

ತಂದೆ, ಬಲವೆಯು ಹೋದ ತಾತ, ಕಾಲಾಗ್ನಿನಲಿ
ಸೇರಿ ಸವೆಸುವೆ ದೇಹ, ಅಪ್ಪಣೆಯ ನೀಡೆಂದು
ಶಿರಬಾಗಿ ಬೇಡುವೆನು, ದೇವ ಕನ್ನಡ ಜೀವ. ( ಬಾಗಿ ನಿಲ್ಲುವನು. )

**ವೆಂಕಟ:**—ರಣರಂಗ, ನಿನ್ನಂತರಂಗದಲಿ ಮೂಡುತಿಹ
ಭಯವಾಣಿ ನಮ್ಮಂತರಂಗದಲಿ ಸಾರುವುದು
"ಭಯವಿಲ್ಲ, ಭಯವಿಲ್ಲ. ಜಯವುಂಟು ಜಯವುಂಟು."
ಪುಣ್ಯದಿಂದಲೆ ನಿಂತ ಕರ್ನಾಟ ಪಟ್ಟಕ್ಕೆ
ಪುಣ್ಯಪುರುಷನೆ ಯೋಗ್ಯ ಆವನಿಲ್ಲದಿನ್ನಾರು
ಕೂರುವುದು, ಏರುವುದು, ಕಾಯುವುದು ಪೀಠವನು ?
ಕಹಿಯ ರಸವನು ತೆಗೆದು ಬೆಲ್ಲದಲಿ ಬೆರಸಿದರೆ
ಕಹಿಯು ಕಳೆಯಲು ಬಹುದು ? ನೇಸರನ ಬಚ್ಚಿಟ್ಟು
ದೀಪಗಳ ಬೆಳಗಿಸಲು ಲೋಕತಾ ಬೆಳಗುವುದೇ ?
ವಿಜಯನಗರದ ಅರಸು ಬಳಿವಿಗೇ ನೀನೊಬ್ಬ
ಹುಟ್ಟಿಬಂದಿಹೆ ರಂಗ. ಮೀಸಲಾಗಿಟ್ಟಿಹುದು
ಆ ಪೀಠ. ನನ್ನಂತರಾತ್ಮನೂ ನೀನೆಂದು
ಹೇಳುವನು. ಈ ನನ್ನ ನಂಬಿಗೆಯ ಭಕ್ತಗಣ
ನಿನ್ನೆಡೆಗೆ ಬಂದಿಹುದು. ಬಾಯೆಂದು ಕೂಗುವುದು.
ಇವರ ಮನವನು ಮುರಿದು ಮತ್ತಾರನಿರಿಸುವುದು ?
ಕನಸಿನಲಿ ಕಣ್ದೆರೆದ ರಕ್ಕಸಗೆ ಬೆದರುವುದೆ ?
ಮನದ ದುಗುಡವನುಗುಳಿ ಶಾಂತಿಯನು ಕೊಳ್ಳು.

---

— **ರಾಜ್ಯತೃಷ್ಣೆ**

ಮಂತ್ರ ತಂತ್ರವ ಮಾಡಿ ಬೆದರಿಕೆಯು ಕಣ್ಕಟ್ಟಿ,
ಬಾಯ್ಗೆರಡು ತುತ್ತಿಟ್ಟು ಸೀಮೆಯನು ದಾಟಿಸುವ.
ಭಯವಿಂತು ದಿಕ್ಕೆಟ್ಟು ದಾರಿಕಾಣದೆಯೋಡಿ-
ಹೋಗಲದು ಮತ್ತೇನು ? ರಾಜಮುದ್ರೆಯ ಧರಿಸಿ
ಈ ವಸ್ತ್ರವನು ತೊಟ್ಟು, ಈ ಕಂಠಿಯನು ಕಟ್ಟು.
ವೈಭವದ ಶಿಖರದಲಿ ನಲಿನಲಿದು ಮೆರೆದಾಡು.
ಕನ್ನಡದ ಜಸಸಿರಿಯು ಗೆಂಟುಗೆಂಟಿಗೆ ಚಿಗಿತು
ಕೊಬ್ಬುತ್ತ ಹಬ್ಬುತ್ತ ಜೊನ್ನದಂತಾಗಲಿ ?
ರಂಗಃ—( ಹರಿದಾಡುವ ಮನದಿಂದ )
ಮುತ್ತಜ್ಜ, ನಿಮ್ಮ ನುಡಿಯನೆ ನಂಬಿ ಬದುಕುವೆನು
ಆದರೂ, ರಾಜ್ಯವನು ಬೇಡೆಂದು ಹೇಳುವೆನು.
ಭಯದಿಂದ ನಡುಗುವೆನು....ಏನು ಮಾಡಲಿ ತಾತ ! ?

ವೆಂಕಟಃ—ಬೆದರದಿರು, ಬೆದರಿಕೆಗೆ ಬಲಿಗೊಟ್ಟು ಶಾಂತಿಯನು
ಮಾಡೋಣ. ಏನೆಂದೆ ?

ರಂಗಃ—( ಮೆಲ್ಲಗೆ ) ನಿಮ್ಮಾಜ್ಞೆ ಮೀರಿಲ್ಲ.
ಮುತ್ತಜ್ಜ ಬರುವ ಭಯಕದು ಬೆದರಿ ನರಳುವೆನು.
ನನ್ನ ಮೇಲಿನ ಪ್ರೇಮ ಭಯಕೆಯಡ್ಡಾದರೆ
ಸುಖವಲ್ಲವೇನು ? ( ಮುಖವು ಅಗಲವಾಗುವದು )

ವೆಂಕಟಃ—( ಆನಂದದಿಂದ ) ರಾಜಗುರು ಬರಮಾಡು. ( ಐಚ್ಚಮನಿಗೆ )
ಎಲ್ಲವನು ತಿಳಿಸು. ನಾಳೆಯಾ ಶುಭದಿನದಿ
ಯುವರಾಜ ಪಟ್ಟಾಭಿಷೇಕವನ್ನಾರಭಿಸು
ಬಹಳ ದಿವಸದಿ ನಾನು ಬಳಲುತಿಹ ಬೇನೆಗದು
ಇಂದು ಮರ್ದವಕೊಂಡೆ. ಬೇನೆ ಸರಿಯಿತು ರಂಗ.
ಬೆಂಡಾಗಿ ಹೋಗಿದ್ದ ಎಚ್ಚಮನೆ, ಶಾಂತರಸ
ಮನದ ಮೇಲದು ಸುರಿದೆ. ಕಂಗಳಿಗೆ ತೊಡೆದಿರುಪ

ಕತ್ತಲೆಯು ಕಿತ್ತೋಡಿ ನಿಚ್ಚಳಾಯಿತು ರಂಗ !
ಜೀವನದ ಬಲು ಹೊರೆಯನಿಳಿಸಿದೆನು ಸರದಾರ.
ಹಿರಿಯರೆಳೆದಿಹ ರಥವ ನಿಮ್ಮ ಕೈಗಿಟ್ಟಿರುವೆ.
ಅದರ ಜಸವನು ಕಾವ ಹೊಣೆಯೆಲ್ಲ ನಿಮಗೆ.

( ಪಂಗಿಲ ಕಡಿಗೆ ಕೈಮುಗಿದು )

ಪಂಪಾಪತೇ ! ನಿನ್ನ ಎಳಮುಗುವ ಜೋಕೆ.
ನಿನ್ನ ಗುಡಿಯಲಿ ಮೆರೆವ ದೀಪಗಳ ಬೆಳಕೆಲ್ಲ
ಹಗೆಯ ತಿಮಿರವ ತೂರಿ ನಾಡಿನಲಿ ಮಿರುಗಿಡಲಿ
ರಂಗದೊರೆ, ಎಚ್ಚಮನೆ, ನಾಡಗುಡಿ ನೆರಳುಗಳೆ
ಸಾವು ಸನಿ ಬಂದಿಹುದು. ನಾಡಿಗಳು ನಿಂದಿಹವು.
ಕಾಲಿನಲಿ ಜೀವಿಲ್ಲ. ಎದೆಯುಸಿರು ಕಟ್ಟುತಿದೆ.
ಕುತ್ತಿಗೆಯ ನೆತ್ತಿಯಲಿ ಜೀವ ನಿಂತಿದೆ ಮಾತ್ರ—
ರಾಮದರ್ಶನಕೆಂದು ಕಾದ ಪಕ್ಷಿಯ ತೆರನೆ—
ನಾಳಿನುತ್ಸವಕೆಂದು ಉಸಿರಿಡುವೆ ಅನತನಕ.
ಚಣ ಚಣಕೆ ಮರೆಯುವೆನು ಈ ಲೋಕ ಬಂಧನವ.
ಕಾಣಲಾರದವೊಂದು, ಕೇಳಲಾರದವೊಂದು,
ಹೇಳಲಾರದವೊಂದು, ಮನವು ಮುಟ್ಟದವೊಂದು,
ಮಾತುಗಳ ಜಣವೆಗೇ ಮುಟ್ಟಲಾರದವೊಂದು,
ಅವುದೋ ಒಂದು ಲೋಕವ ನಾನು ಕಾಣುವೆನು.
ಮೊದ ಮೊದಲು, ಒಮ್ಮೊಮ್ಮೆ ಕತ್ತಲೆಯ ಮಡುವಿನಲಿ
ಕಿಡಿಗಳೀಜಾಡಿದಂತೆ ಮಸಕಾಗಿ ಕಂಡೆ.
ಈಗ ನೋಡುತಲಿಹೆನು ಬೆಟ್ಟದೊಡೆಯನ ಹಾಗೆ !
ಕಣ್ಣು ತೆರೆಯಲು ಬಾರದಾ ಜೀವ ಒಳಗಣ್ಣ
ಬಿಚ್ಚುತ್ತ ತನ್ನ ಹಿಂದಿನ ಕತೆಯ ಬರೆಯುವುದು.
ಆ ಲೋಕದೊಳಗಿದ್ದ ದೊರೆಗಳಿಗೆ ಸಲಿಸುವುದು

—ರಾಜ್ಯತೃಷ್ಣೆ.

( ಎಚ್ಚಮನಿಗೆ ಉದ್ದೇಶಿಸಿ )

ಎಚ್ಚಮನೆ, ಮಿಕ್ಕವರೆ ಹೋಗುವೆನು. ಹೊರಟೆ.
ರಂಗದೊರೆ ಬಿಕ್ಕದಿರು. ನಾನು ಹೋಗುವೆನೆಂದು
ಮರುಗದಿರು. ನೇಹವನು ನಿನಗಾಗಿ ತೊರೆದೆಯೋ
ಹೋಗುವೆನು ಕನ್ನಡದ ಪ್ರಜೆಗಳಿಗೆ ಕಲ್ಪತರು
ನೀನಾಗಿ ಆಳುವುದು. ಅಲ್ಲಿ ಕುಳಿತರು ನಾನು
ಇದನೆಲ್ಲ ನೋಡುವೆನು. ಎಚ್ಚಮನೆ ನಾಳೆಯು
ಉತ್ಸವದ ಡಂಗುರವ ಸಾರು, ಜನಗಳಿಗರುಹು.
ವೈಭವವು ಮಿಗಿಲಾಗಿ, ಶೋಭನೆಗೆ ನೆಲೆಯಾಗಿ,
ಹಬ್ಬದಾಗರವಾಗಿ, ಜಸವೆತ್ತು ನಡೆಯುಲಿ.
ಭಂಡಾರನೊಡೆದಲ್ಲಿ, ಕುರುಡರನು. ಕುಂಟರನು
ತಾಯ-ತಂದೆಯ ತೊರೆದ ಮಕ್ಕಳನು, ಪೋಸರನು
ಒಳಹುಗಿಸಿ, ಬರಿದಾದ ಬಯಕೆವಟ್ಟಲ ತುಂಬು.
ಕಾಲವದು ಬಹಳಿಲ್ಲ ಜಾಗ್ರತೆಯ ಮಾಡುನಡೆ.
ಕೊನೆಯುಸಿರು ಬಾಯ್ಕಟ್ಟೆ ನನ್ನ ನುಂಗುವ ಮೊದಲೆ
ತೋರೆನಗೆ. ಈ ಕಣ್ಣು ಈ ಜಗದ ಸೊಬಗನ್ನು
ನೋಡಬೇಕೆಂಬಾಸೆ ಮುಡಿವಂತೆ ಮಾಡುನಡೆ.
ಆ ಮುಂದೆ ಶಾಂತಿಯುಲಿ ಜೀವವದು ಸೇರುವದು.
ನಿಲ್ಲದಿರು ನಿಲ್ಲದಿರು. ಮುಂದೆ ಕರೆಯುವ ಕೆಲಸ
ಮಾಡು ನಡೆ. ಅಲ್ಲಿಹುದು ನನ್ನ ಬಾಳಿನ ರನ್ನ.
ದೇಹಕದು ಮರಳಾಗಿ, ಕಾರ್ಯಕದು ಹಿಂದಾಗಿ
ಏಳ್ಗೆಗದುಯಡ್ಡಾಗಿ ನಿಲ್ಲದಿರು. ನಡೆ ಮುಂದೆ.
ಎಚ್ಚಮನೆ, ನಾಳೆಯನಕ ಬದುಕುವೆ ಬಿಡದೆಯೆ,
ಹೋಗು ನಡೆ. ( ಎಚ್ಚಮನು, ಉಳಿದವರು ಮೆಲ್ಲಗೆ ಎದ್ದು ಹೋಗು
ವರು. ವೆಂಕಟರಾಯನು ಹೋದ ದಾರಿಯನ್ನೇ ಕೆಲಹೊತ್ತು ನಿರೀಕ್ಷಿಸಿ ).

ಹೋಯಿತೇ, ನಂಬಿಗೆಯ ನಾಯಿಯು ?

ದಳ್ಳುರಿಯುದಾವರಿಸಿ ಹಿಂದಕ್ಕೆ ಸಿಂಹಾಸ—
ನಕ್ಕೆ ಬಂದವು ಬಹಳ. ಎಲ್ಲವನು ನೀಗುತ್ತ
ನಿಂದಿಹುದು ವಿಜಯನಗರದ ಗುಡಿಯು ಯಾರಿಂದ ?
ಇಂತಿಂತ ನಂಬಿಗೆಯ ಕೆಚ್ಚೆದೆಯ ಕನ್ನಡಿಗ—
ರಿಂದಲ್ಲದಿನ್ನಾರು ? ಆ ದೇವನಾವೇಶ
ಇವರೊಳಗೆ ಸೇರುತ್ತ ಕಾಯ್ದುಕೊಂಡಿತು ಕೀರ್ತಿ.
ಈ ಮುಂದೆ ರಕ್ಷಿಪುದು ಅದುವಲ್ಲದಿನ್ನಾರು ?

( ದೊಪ್ಪೆಂದು ಹಾಸಿಗೆಯ ಮೇಲೆ ಮಲಗುವನು. ಅವನ ನರಳುವಿಕೆಯು ಒಂದೆರಡು ಕೇಳಿ ಕೇಳುತ್ತಲೆ ಪರದೆಯು ಮೆಲ್ಲಗೆ ಬೀಳುವುದು.)

---

— ರಾಜ್ಯತೃಷ್ಣೆ

## ಪ್ರವೇಶ ೨.

( ಪಟ್ಟಾಭಿಷೇಕವಾಗಿ, ವೆಂಕಟಪತಿಯು ತೀರಿಕೊಂಡ ಕೆಲವು ದಿವಸಗಳ ಮೇಲೆ, ರಂಗರಾಯನು ತನ್ನ ಅರಮನೆಯಲ್ಲಿ ಕುಳಿತು ದೀರ್ಘವಾಗಿ ಒಬ್ಬನೇ ವಿಚಾರಿಸುತ್ತಿರುವನು. ಸದ್ದಿಲ್ಲ. ಸಪ್ಪಳವಿಲ್ಲ. ತಾನೇ ತಾನು. ವಿಚಾರವನ್ನು ಮಾಡಿ ಮಾಡುತ್ತಲೆ— )

ರಂಗ:—( ಒಂದು ಬಗೆಯ ಆವೇಶದಿಂದ )

ಅರಿಗಣದ ಭೇರುಂಡ, ಭುಜಬಲದೋರ್ದಂಡ
ಕಾಳೆಗಕೆ ನಿಜಗಂಡ, ಅತುಲಬಲಯುತ ಚಂಡ,
ತಂದೆ ವೆಂಕಟದೊರೆಯು ಸಗ್ಗವನು ಸೇರಿ
ಮೂರು ದಿನ ಮಿಕ್ಕಿಲ್ಲ. ನಾಡಿನೊಳಗದು ಬೇಗಿ
ಬಲಿಯುತಿದೆ ಭರದಿಂದೆ. ತೋರಲಾರದೆಯೊಳಗೆ
ಹೊತ್ತುತಿದೆ ಚಿಳಿಛಿಟಿಯೆ. ಸಿಂಹಾಸನವ ಕೂಡ
ಇಂದು ನಾಳೆನ್ನದೆ ಮುಟ್ಟುವುದು ನಿಜವೆಂದು
ಮನಸ್ಸು ನುಡಿಯುತಲಿಹುದು. ದೃಢವಾಗಿ ನಂಬುವುದು.
ಅಂತಃಕಲಹಕ್ಕಂಜಿ ಜೀವವದು ಬೇಡೆಂದು
ಸಾರುತಿದ್ದಿತು ಮೊದಲು. ಈ ರಾಜಮುದ್ರೆಯೇ
ಕಲಹಕ್ಕೆ ಕಾಳಾಗಿ ಬಂದಿಹುದು. ನುಂಗಲ್ಕೆ

( ಕೋಪದಿಂದ ರಾಜಮುದ್ರೆಯನ್ನು ಉದ್ದೇಶಿಸಿ )

ಯಾರನ್ನು ? ಯಾರನ್ನು ನುಂಗಲ್ಕೆ ? ಬಗುಳೊಮ್ಮೆ

( ಎಂದು ಅದನ್ನು ಬಿಸುಡಿ ಕೆಲಹೊತ್ತು ಅದನ್ನೇ ನೋಡುತ್ತ ನಿಲ್ಲುವನು )

ದೈವವೇ! ನಾಚಿಕೆಯ ನೂಕುತ್ತ ಬಗುಳೊಮ್ಮೆ ! ( ವಿಚಾರಿಸಿ )
ದೈವಕ್ಕೆ ನುಡಿಯುಂಟೆ ?....ದೈವಕ್ಕೆ ಏನುಂಟು ?
ದೈವಕ್ಕೆ ಕಣ್ಣಿಲ್ಲ ದೈವಕ್ಕೆ ಕಿವಿಯಿಲ್ಲ
ದೈವಕ್ಕೆ ದನಿಯಿಲ್ಲ. ದೈವಕ್ಕೆ ದಯವಿಲ್ಲ.

( ಶಾಂತನಾಗಿ ಒಂದೆರಡು ಹೆಜ್ಜೆಗಳನ್ನು ಹಾಕಿ )
ತಂದೆ **ವೆಂಕಟಪತಿಯು** ಬಾಯುಮ್ಮನೆತ್ತಿರುವ
**ರಂಗನನು** ಸಿಂಹಾಸನವನೇರಿಸುವದೊಳಿತು !
ಇತ್ತಲ್ಲ ? ( ತಲೆ ಜಾಡಿಸಿ ) ಇದಿರು ನಿಂತೀ ಖಡ್ಗ ಒರೆಯಿಂದ
ಹೊರಗಿಣಿಕುತಿದ್ದುವೇ ತಾತ ವೆಂಕಟೇಶ—
ಶಾಂತಿಯಲಿ ಸೇರಿಸುವ ಕನ್ನಡದ ದೊರೆಯೇ ?
( ಉದ್ದೇಶಿಸಿ ಪ್ರತ್ಯುತ್ತರ ಪಡೆಯುವವನಂತೆ ನಿಂತು)
ನೀನು ನೀಡಿದ ವರವ ಕರ್ನಾಟ ದೇಶವನು
ತೋಷದಲಿ ತಳೆದಿರುವೆ. ಎಚ್ಚಮನೆ, ಮಂತ್ರಿವರ
ನಿಮ್ಮ ಭರವಸೆಯುಸಿರ ಬಲಗೊಂಡು ರಾಜ್ಯವನು
ಧರಿಸಿರುವೆ ಶಿರದೊಳಗೆ. ಕನ್ನಡದ ಕಲಿಗಳೇ
ನಿಮ್ಮ ಕೈದುಗಳೆನ್ನ ಪೀಠದಲಿ ನಿಲಿಸಿಹವು.
ದೇವ ವಿರುಪಾಕ್ಷನೇ ತಾನಾಗಿ ಕರೆದಿಹನು.
ಇವರೆಲ್ಲರನು ನಂಬಿ ನಿಂದಿಹೆನು ನಾಡಿನಲಿ.
ಅಮರಲೋಕದ ಪತಿಯು ತನ್ನ ಜೀವದ ವಸ್ತು
ರಕ್ಷಿಸಲು ಶಿಕ್ಷಿಸಿಹ. ಜೀವವನು ತೊರೆದರೂ
ಕಾಯುವುದು ಧರ್ಮವಿದೆ. ಭೈರವನೆ ಇದಿರಾಗಿ ( ಕೋಪಾಟೋಪದಿಂದ)
ಬಂದರೂ ಕಾಯುವೆನು. ದೇಹದಲಿ ಹನಿರಕ್ತ—
ವುಳಿದರೂ ತೋರುವೆನು ರಣರಂಗನಾರಂಗ.
ಮಡಿದರಿದೆ ಮುಕ್ತಿಯು. ಗೆಲಿದರಿದೆ ಗದ್ದುಗೆಯು.
ಎರಡರಲಿ ಹುರುಳಷ್ಟೆ. ( ಆವೇಶದಿಂದ ಭುಜಗಳನ್ನು ತಟ್ಟಿಕೊಂಡು )
ಜಗರಾಯ, ತಿಮ್ಮರಿಗೆ

—ರಾಜ್ಯತೃಷ್ಣೆ

ಕಾಳೆಗದ ಕಣದೊಳಗೆ ನೆತ್ತರದ ಹೊಳೆಹಾಕಿ,
ಮಾಂಸದಾ ದಂಡೆಯಲಿ ಎಲುವುಗಳ ಗಿಡನೆಟ್ಟು,
ಕರುಳವಳ್ಳಿಯ ತೊಡಿಸಿ, ಕಣ್ಣುವೂಗಳ ಬಿರಿಸಿ,
ತಲೆಗಾಯನಿಳಿವಿಟ್ಟು, ಗರಳು ಗಾಳಿಯ ಬೀಸಿ,
ಮಜ್ಜೆಯಾ ರಸವನ್ನು ಕಾಯಿಂದ ಹನಿಹನಿಸಿ
ಭೂತ ಬೇತಾಳಗಳ ಕಾವಲಿಗೆಯಿರಿಸುತ್ತ,
" ರಾಜ್ಯತೃಷ್ಣಾ " ಎಂಬ ಜೈಲಿಗದು ಬರಮಾಡಿ,
ಏಳೇಳು ಜನ್ಮದಲಿ ಮರೆಯಲಾರದ ಹಾಗೆ
ಮಾಡುವುದು ಮನದಾಸೆ. ಅಲ್ಲದಿರೆ ಈ ತೋಡವು,
ಈ ಮುದ್ರೆ, ಈ ರಾಜ್ಯ, ಈ ಮಾನ, ಈ ಭೋಗ,
ಈ ಪವಿತ್ರ, ಈ ಪೀಠವೇತಕ್ಕೆ! ( ಭಾವನಾವಶನಾಗಿ ಹೋಗುವನು.

—ಪರದೆ

# ಪ್ರವೇಶ ೩.

(ಬಾಯಮ್ಮನರಮನೆಯು. ಬಾಯಮ್ಮ, ಜಗರಾಯ, ತಿಮ್ಮನಾಯಕ, ಮತ್ತೆ ಕೆಲವು ಚಿಕ್ಕಪುಟ್ಟ ಸರದಾರರು ಕುಳಿತಿರುವರು. ಕೆಲಹೊತ್ತಿನ ವರೆಗೆ ಯಾರೂ ಮಾತಾಡುವದಿಲ್ಲ. ಬಾಯಮ್ಮನು ಇಳಿಮೊಗ ಮಾಡಿಕೊಂಡು ಕುಳಿತಿರುವಳು. ಉಳಿದವರ ಮುಖವೂ ಒಂದಿಷ್ಟು ಸಪ್ಪೆಸಪ್ಪೆಯಾಗಿ ಇದೆ. ಅಷ್ಟರಲ್ಲಿ ಬಾಯಮ್ಮನು ತನ್ನ ಇಳಿದ ಮುಖವನ್ನು ಮೆಲ್ಲಗೆ ಮೇಲೆ ಮಾಡುವಳು. ಅದನ್ನು ಕಂಡು...)

ಜಗರಾಯ:—ಹೆದರದಿರು ತಂಗೀ ನೀ ಹೆದರದಿರು. ಧೈರ್ಯವಿಡಿ.

ಹತ್ತು ವರುಷದ ಬಯಕೆ ತುಂಬುತಿದೆ ಜವದಿಂದ
ಘೋರಸಾಗರದೊಳಗೆ ದಾರಿಕಾಣದವೊಂದು
ನಾವೆ ನಡೆಯುತಲಿಹುದು. ಒಳಗೆ ನರಳುವ ಜೀವ
ಗಗನವನು ಮುದ್ದಿಡುವ ನಾಲ್ಕು ದೆಸೆಯನು ಬಳಸಿ,
ಬೆಳೆದು ತುಳುಕುತಲಿರುವ ಗಾಧ ಜಲರಾಸಿಯನು
ನೋಡುತ್ತ ನಡನಡುಗಿ, ನೀಲಿಯಲಿ ಕಣ್ಣಿಟ್ಟು
ಕುಳಿತಿಹನು ಭ್ರಾಂತಿಯಲಿ, ಘನತಿಮಿಂಗಲ ಜಠರ
ತುತ್ತುಗಳು ತಾವೆಂದು!........ಇದಿರು ಕಂಡಿತು ಭೂಮಿ!!
ಅವರ ಆಗಿನ ಮುದವ ಶಬ್ದದಲಿ ಹೇಳುವುದೇ?
ಆ ಮೋದ ನಿನಗಿಹುದು. ಕನ್ನಡದ ಸಾಮ್ರಾಜ್ಞಿ,
ವೈರಿ ಬಾಯ್ಗಳ ಕಟ್ಟಿ ಮೆರೆಯುತಿಹ ಮಾದೇವಿ,
ಹೆದರದಿರು. ಅರ್ಚಕನ ಮುಂದಿಟ್ಟ ದೇವರಾ
ಧನವನ್ನು ಬರಡು ಮಾನವನೊಬ್ಬ ಕದಿವಂದು
ದೆವ್ವಗಳ ದವಡಿಯಲಿ ತುತ್ತಾಗಿ ಸೇರಿದನು.
ಆ ರಂಗ ಮುದ್ದಿಡುವ ಸೆರೆಮನೆಯ ಸೂಲಿಯನು.
ಸೆರೆಮನೆಯೆ ಅರಮನೆಯು. ಅಲ್ಲಿಯೇ ಕಟ್ಟುವೆನು
ಅವರಾ ಸಮಾಧಿಯನು. ಹೆದರದಿರು ಬಾಯಮ್ಮ.

—ರಾಜ್ಯತೃಷ್ಣೆ

ತಿಮ್ಮನಾಯಕಃ—ಅರಸು ಬಳವಿಯ ಬೀಜ, ಬಾಯಮ್ಮ ಇದುವೊಂದೆ.
ಮಿಕ್ಕ ಒಣ ಬೇರುಗಳು ಕೊಳೆಯುತಿವೆ ಬಂದಿಯಲಿ.
ಬಲು ಬಳಲಿ ಬತ್ತುತಿವೆ. ಬೇಸಗೆಯ ಕಾಲದಲಿ
ಒಣಗಿ ಹೋಗುವವೆಂದು ಸತ್ಯವೆಂದರುಹುವೆನು.
ಬೆದರಿಕೆಗೆ ಬೆನ್ನಿಲ್ಲ. ಅಂಜಲ್ಕೆ ಮಂಜಿಲ್ಲ.

ಬಾಯಮ್ಮ:–(ಮೆಲ್ಲಗೆ) ಜಗರಾಯ ಬೆದರುವೆನೆ ? ನಾಯಕರೆ ನವೆಯುವೆನೆ ?
ನನಗೇಸು ಭಯವಿಲ್ಲ. ಭೀತಿಗದು ಬಲಿಯಾಗಿ
ನೀವು ನಿಂತುದ ಕಂಡು ಹೆದರುವೆನೆ ! ಹೆದರಿಕೆಯು
ಒಳಗಿಣಿಕಿ ಬರದೆಂಬ ಭರವಸೆಯು ನನಗುಂಟು.
ಆದರಿದೆ ಚಿಂತೆಗೆ (ತಡೆತಡೆದು) ಬೇರೊಂದು ಕಾರಣವು.

ಜಗರಾಯ:—(ಆತುರದಿಂದ) ಯಾವ ಕಾರಣವರುಹು ?

ತಿಮ್ಮ:—(ವಿಸ್ಮಯದಿಂದ) ಬೇರೊಂದು ಕಾರಣವೆ ?

ಬಾಯಮ್ಮ:—ಅಹುದುಂಟು ಬೇರೊಂದು ಕಾರಣವು ಸತ್ಯ.

ಜಗರಾಯ:—ಏನೇನು ? ಏನುಂಟು ?

ತಿಮ್ಮ:— ಯಾವುದದು, ಬೇಗನುಡಿ ?

ಬಾಯಮ್ಮ:—ರಾಜನಲ್ಲವೆ ನನ್ನ ಮುದ್ದುಮಗು ರಂಗ ?
ನಾಡಿಗರ ಅಲ್ಲೆಂಬ ನುಡಿಯೊಂದು ಮಿಡಿಯುತಿದೆ !

ಜಗರಾಯ:–(ಸಿಟ್ಟಿನಿಂದ) ಯಾರಿಂತು ಹೇಳುವರು ? ಬರಮಾಡು ಬಳಿಯಲ್ಲಿ.
ಯಮಪುರಿಯ ಹಬೆಯನ್ನು ಮೂಸಬೇಕೆಂದಿಹರೆ ?

ಬಾಯಮ್ಮ:—ಇದಿರುಗದರುವರಾರು ? ನೀವು ಕೇಳದ ಸುದ್ದಿ
ನಾನು ಕೇಳುತಲಿಹೆನು. ಕಾಳೆಗದ ಬೈಲಿನಲಿ
ಕೈದುಗಳ ಮಸೆದಾಟ, ಸಭೆಯೊಳಗೆ ಗಜಬಜೆಯು,
ಪಟ್ಟಣದ ಬೀದಿಯಲಿ ಭಟ್ಟಂಗಿ ಬಾಯ್ಮಾತು,
ಇಂತಿರುವ ನಿಮಗೆ ಈ ಸೂಕ್ಷ್ಮ ಸಂಗತಿಯಿಲ್ಲ

ಅರಮನೆಯ ತಣಾಪಾದ ಶಿಲೆಯ ಮೇಲದು ಕುಳಿತು
ಈ ನಿಂತ ಹಬೆಯನೇ ಎಳದಾಡಿ ಬಾಳಿರುವ
ಕಿವಿಗಳಿಗೆ ಆ ಸೂಕ್ಷ್ಮ ಸಂಗತಿಯು ತಾಗುವುದು
ದಿನದಿನವು ಜಗರಾಯ.

ತಿಮ್ಮ:—(ತಲೆತೂಗುತ್ತ) ಅಚ್ಚರಿಯು. ಅಚ್ಚರಿಯು.

ಬಾಯಮ್ಮ:—ಹೊಗೆಯಂತೆ ಕಾಣುವೀ ಬೇಗೆ ಬಲಿತೊಮ್ಮೆಯೆ
ಭುಗಿಲೆಂದು ಅರಮನೆಯ ಮುಟ್ಟಿ ಸೀಕರಿಯುವುದು.
ಸೀಳುವುದು ಭಿತ್ತಿಗಳ ಸಿಡಿಸುವುದು ಹೊಂಗಂಬ
ದಹಿಸುವುದು ರನ್ನದೊಲೆ ಕಿತ್ತುವುದು ಝುಲ್ಲರಿಯ
ಅಂತಲಕ್ಕಣವರಿತು ತಣ್ಣೀರ ಹನಿಸುತ್ತ
ಶಾಂತವನು ಮಾಡುವುದು ಬುದ್ಧಿವಂತಿಕೆ ತಿಮ್ಮ.
(ಒತ್ತರಿಸುತ್ತ ಓಬಲನು ಬರುವನು)
ಮೇಲೆ ಬಾ ಬಲರಾಯ. (ಓಬಲನು ಹಾಗೇ ನಿಲ್ಲುವನು).
ಸೆರೆಮನೆಯ ಸಂಗತಿಯು.....

ಓಬಲ:—ಸೆರೆಮನೆಯ ಸಂಗತಿಯು ! (ಒಮ್ಮೆಲೆ ಮುಖವೆತ್ತಿ)
ಮೋಸಮೋಸವು ತಾಯಿ !

ಎಲ್ಲರು:—(ಗಾಬರಿಯಿಂದ) ಎಂಥ ಮೋಸೋಬಲನೆ ? ಏನಾಯಿತೇನೇನು ?

ಓಬಲ:—(ಹಣೆಗೆ ಕೈಹಚ್ಚಿಕೊಂಡು ಒಂದುಕಡೆಗೆ ಹೋಗಿ ಕುಳಿತು)
ಆಗುವುದೆ ಆಗಿಹುದು. ಸರ್ವನಾಶವು ನಾಶ—
ವಾಯಿತ್ತೈ ನಮ್ಮ ಒಣಬರಡು ಬುದ್ಧಿಗೆ ನಿಜದಿ.

ಬಾಯಮ್ಮ:—(ತವಕದಿಂದ) ಓಬಲನೆ, ಏನಾಯಿತರುಹು ?

ಓಬಲ:— ಅರುಹುವುದೆ ?
ಸೆರೆಮನೆಯ ಸುತ್ತೆಲ್ಲ ರವಿಶಶಿಯನಣಕಿಸುವ
ಸೈನಿಕರ ಕಣ್ಣುಗಳು ಕಾದ ಎಣ್ಣೆಯನುಂಗಿ
ನಿಂತರೂ ಮೋಸ ! ಮೋಸವಾಯಿತು ಜಗರಾಯ !!!

—ರಾಜ್ಯತೃಷ್ಣೆ

ವೈರಿಬೀಜದ ಬೇರು ಬಂದಿಯಿಂದದು ನುಸುಳಿ
ಓಡಿಹುದು. ದ್ವಾಪರದ ಯುಗದೊಳಗೆ ಮೋಹಿನಿಯು
ಗೋಪಾಲನನ್ನೆತ್ತಿ ಬಚ್ಚಿ ಬಳೆಸಿದ ತೆರನೆ
ರಂಗನಾ ಕಿರಿಮಗನು ಜಾರಿದನು ಬಲೆಯಿಂದ.
ಎಚ್ಚಮನು ಕಟ್ಟಿರುವ ದ್ವಾರಕಾ ಪುರದೊಳಗೆ
ಬಳೆಯು ಹೋದನು ರಾಜ್ಞಿ. ಜಗರಾಯ, ನಾಯಕರೆ......

(ತಲೆಹೊಡೆದುಕೊಂಡು) ಹಾ ವಿಧಿಯೆ! ನಾವು ಮಾಡುವದೊಂದು ತಾನು ನಡೆ
ಸಿದೆಯೊಂದು (ಸಿಟ್ಟಿನಿಂದ) ಆ ಸೇಡು, ಆ ಸೇಡು ಎಚ್ಚಮನ
ಮೇಲಿನಾ ಸೇಡು ಯಾವಬಗೆ ತೀರಿಸಲಿ. ಹಾ....
(ಚಡಪಡಿಸುತ್ತ ಮೀಸೆ ಹುರಿಹಾಕುವನು)

ಬಾಯಮ್ಮ:—(ದೀರ್ಘವಾಗಿ ಉಸಿರುಗರೆದು)
ಜಗರಾಯ, ನಾಯಕರೆ ಹೆದರಿಕೆಗೆ ಗೆಲುವಾಯ್ತು.
ಬರುವ ಚಿಂತೆಗೆ ಬೆದರಿ ಕುಳಿತಿದ್ದೆ ನನೆಯುತ್ತ
ಮುಂಜಾವಿನಿಂದೆನಗೆ ಜೀವದಲಿ ಸರಿಯಿಲ್ಲ.
ಒಳಗೆಯುಡಗಿದ ಪ್ರಾಣ ಆವುದೋ ಚಿಂತೆಯನು
ಜಪಿಸುತ್ತ ಕುಳಿತಿತ್ತು. ಈ ಹಾಳು ಸುದ್ದಿಯನು
ಕೇಳಲ್ಕೆ ಮಿಡಕುತ್ತಲಿತ್ತನಕ ಜಗರಾಯ-
ನಂಬಿದೆನು ನಿಮ್ಮನ್ನು ನಂಬುವೆನು ಮುಂದಿನ್ನು.
ಎಚ್ಚಮನು ಮೂರುಲೋಕವ ಸುತ್ತಿ, ಏಳು ಕೆರೆ-
ಯನು ಕೆತ್ತಿ, ಪಾತಾಳವನು ತುತ್ತಿ, ಶೇಷನಾ-
ಶಿರವನ್ನು ಕಿತ್ತಿಯಾ ಕೈಬಲೆಯ ಬೀಸುತ್ತ
ಕಾರ್ಯವನು ಸಾಧಿಸುವ. (ಹಣೆಯನ್ನು ಹೊಡೆದುಕೊಳ್ಳುವಳು.)

ತಿಮ್ಮ:—(ಸಮಾಧಾನದ ಮಾತಿನಿಂದ)
ಮೊಳಕೆಯನು ಮನೆಗೆತ್ತಿ
ಹಾಳು ನೆಲಕೂಳಿದರೆ ಮರವಾಗಿ ಚಿಗಿತು

ಫಲವ ಕೊಡುವುದೆ ನಿಜದಿ? ಈ ಹುಚ್ಚು ಎಚ್ಚಮಗೆ
ಹಿಡಿದಿಹುದು. ಇದಕಾಗಿ ಹೆದರುವೆಯೊ? ಬಿಡುಬಿಡು.

ಬಾಯಮ್ಮ:—( ತಿರಸ್ಕಾರದಿಂದ ) ಭರವಸೆಯ ನಾವೆಯದು
ಸಾಗರದ ತಳದೊಳಗೆ
ಅಡಗಿರುವ ಬಂಡೆಯನು ತಾಗಿ ಪುಡಿಯಾದರೂ
“ ಹೆದರದಿರಿ, ಹೆದರದಿರಿ ” ಎಂಬ ವರ ನೀಡುವಿರಿ.
ಗಂಡುಸರೆ, ಕನ್ನಡದ ರಥವನ್ನು ನಡಿಸುತಿಹ
ಅತಿರಥರೆ, ಬಿಚ್ಚುಗತ್ತಿಯ ಜಳವು ಸಿಂಪಿಹುದು
ಸಾಲಾಗಿ ಕೋಟೆಯಾ ಹೊರಮೈಯ ತಳದಲ್ಲಿ.
ಮಹಾದ್ವಾರದ ಮುಂದೆ ಐವಾಯ ಪುಲಿಯಂತ
ಸೈನಿಕರು ಕೆಂಗಣ್ಣುಗಳ ಬಿಟ್ಟು ಕಾಯುವರು.
ಮುಗಿಲ ಮುದ್ದಿಡುವಂತ ಮೆರೆಯುತಿಹ ಕಲ್‌ಕೋಟೆ—
ಏಳು ಗೋಡೆಯ ಮನೆಯು—ಮುದದಿಂದ ಮುಸುಗುಡುತ
ಹೇಳುತಿಹ ಸೆರೆಮನೆಯು— ಸಲ್ಲಪನೆ ನೋಡಿಯ
ಮಂತ್ರವೂದಿದ ಬಂಟ, ಪಾತಾಳ ತಂತ್ರಿ,—
ಎಚ್ಚಮನು, ಆ ಸಸಿಯ ಬೆಳೆಸುತ್ತ ರಾಜ್ಯವನು
ಗಳಿಸದಲೆ ಬಿಡನೆಂದು ಘೋಷಿಸುವೆ ಗಂಡುಸರೆ.
ಅಪಯಶದ ಕರಿಮಸಿಯು ಮುಖವನಕ್ಕಿದೆ ನೋಡಿ.
ನಗರದಲಿ ನೆಲೆಸಿರುವ ನಾಗರಿಕ ನಗುತಿಹರು.
ಎಚ್ಚಮನ ಬಾಹುಗಳ ಶಕ್ತಿ ತಿಕ್ಕುತಲಿಹರು.
( ಸರದಾರರ ಕಡೆಗೆ ಕೈಮಾಡಿ )
“ ಹೆದರದಿರಿ ” ಜಪವನ್ನು ಮಾಡುವಿರಿ ನುಂಗಿ
ಗಂಡುಸರೆ, ಮೀಸೆ ಮುಕ್ಕಿತು ಮಣ್ಣು. ಅರಿಯದಲೆ
ಮದದಿಂದ ತೀಡುವಿರಿ ಜಯವೆಂದು. ಜಯವಿಲ್ಲ.
ವೈರಿ ಬಳೆಯುತಲಿಹನು ಜಗದ ತೊಟ್ಟಿಲ ಮೇಲೆ
ಬಲಿಯುವನು. ಬಾಳುವನು ಉಳಿಯುವನು. ಗೆಲೆಯುವನು.

— ರಾಜ್ಯತೃಷ್ಣೆ

ಜಗರಾಯ, ನಾಯಕರೆ, ಓಬಲನೆ ಮಿಕ್ಕವರೆ
ಸಾಹಸದಿ ನೀವೆನಗೆ ಹಾಲು ಕುಡಿ ಕೊಟ್ಟಿರಿ.
ಆ ಹಾಲು ಹುಳಿಯಾಗಿ ಗಂಟಲಿಗೆ ಇಳಿಯುತಿದೆ.
ಎನ್ನ ದೇಹದ ಸ್ಥಿತಿಯು ಕೆಡುತಿಹುದು ಬಹಳ.
ಜಗರಾಯ, ಮರುಳ ಮಡುವನು ಸೇರಿ ಗತಿಗಾಣೆ.
ಗತಿಗಾಣೆ. ಎಚ್ಚಮಗೆ ಬಹಳುಂಟು ದೈವಬಲ.
ಎಳಗೂಸನೇ ನಿಜದಿ ಗದ್ದುಗೆಯ ನೇರಿಸುವ ( ದುಃಖಾತಿರೇಕದಿಂದ )
ನನ್ನ ಹೊಟ್ಟೆಯ ಕರುಳು, ( ಎದೆ ಹೊಡೆದುಕೊಂಡು )
ನನ್ನ ಹೊಟ್ಟೆಯ ಕೂಸು
ರಣರಣವ ತಿರುಗಾಡಿ, ಹೆಣ್ಣೆಲೆಯನಗಿಯುತ್ತ,
ಹಸಿಗಾಯಿ ಕಡಿಯುತ್ತ, ಹರಿವ ನೀರನೆ ಕುಡಿದು,
ಹುಲ್ಲು ಮೇಲದು ಮಲಗಿ, ಗಗನವನೆ ಹೊದೆದು
ಬಾಳುವುದು, ಬದುಕುವದು.
( ಒಂದು ಕಡೆಗೆ ತನ್ನ ಮಗ ರಂಗನೇ ಕಂಡಂತೆನಿಸಿ ) ಜಗರಾಯ ನೋಡಲ್ಲಿ,
ನನ್ನ ಮುದ್ದಿನ ಮುದ್ದೆ, ತಿರಿಕನಾ ತಟ್ಟೆಯಲಿ
ಕೈಯಿಕ್ಕಿ ನೆಕ್ಕುತಿದೆ; ಬಡವರಾ ಗುಡಿಸಲಲಿ
ಇಣಿಕಿಕ್ಕಿ ತಂಗುಳಕೆ ಬಾಯ್ ಬಿಡುತ ನಿಂದಿಹುದು.
ಊರ ಎಂಜಲ ತಿಂಬ ಭಿಕ್ಷುಕರು ಬಯ್ಯುವರು !
ಬಳಿಯಲ್ಲಿ ಬರಗುಡರು. ಅವನ ರೂಪವ ನೋಡು
( ಎದ್ದು ಜಗರಾಯನನ್ನು ಬಿರಬಿರನೆ ನೋಡಿ )
ನಾಯಕರೆ ಕಾಣಿಸನೆ ? ನೋಡಲ್ಲಿ ನೋಡು !!
ಬೀದಿಯಲ್ಲಿ ನಡೆದಿಹನು. ಮುಗ್ಗರಿಸಿ ಬಿದ್ದನು.
ಹಲ್ಲೆರಡು ಉದುರಿದುವು ( ಅತ್ತ ಇತ್ತ ಓಡಾಡುತ್ತ )
ಕೆನ್ನೀರು! ಕೆನ್ನೀರು !!
ಜಿಗಿಯುತಿದೆ ಬಾಯಿಂದ. ಹಾ! ಹಾಯ!! ಯಾರಲ್ಲಿ
ನಿಂದಿಹರು ? ಅಯ್ಯೋ.... ಬಳಗದಾ ಬಳ್ಳಿಯದು

ನಗುತಿಹುದು ನೋಡುತ್ತ. ಜಗರಾಯ ನಾಯಕರೆ....

( ಎಂದು ದೇಹಭಾನವಿಲ್ಲದವಳಾಗಿ ಓಡತೊಡಗುವಳು. ಓಬಲನು ಓಡುತ್ತ ಬಂದು ಅವಳನ್ನು ಹಿಡಿದುಕೊಂಡು ಕೂಡಿಸುತ್ತ )

ಓಬಲ:—ಇಂತೇನು ಸಾಮ್ರಾಜ್ಞಿ ?

ತಿಮ್ಮ:—( ಸಿಟ್ಟಿನಿಂದ ) ಎಚ್ಚಮನೆ. ಎಚ್ಚಮನೆ! ( ಹಲ್ಲುಕಡಿಯುವನು )

ಜಗರಾಯ:—( ಸಂತಾಪದಿಂದ ) ಸೆರೆಮನೆಯ ಮೂಲೆಯಲಿ ಸಿಲುಸಿರಿಡುವ ನಡೆವೆಣವ

ಅಂತಕನ ಸಂತೆಯಲಿ ಮಾರಗುಡು. ಆ ಬಳಿ
ಬೇರುಗಳ ಚಿವುಟುವೆನು. ಓಬಲನೆ ಓಡೋಡು.
ಒಂದುಳಿಯದಂತೆ ಹಗೆಯ ಕಡಿದಿಡು ಮೊಟ್ಟೆಯಲಿ.
ಅವರ ಹೆಣಗಳ ನೋಡಿ ತುತ್ತುವುದು ಈ ದಿನವು.

ತಿಮ್ಮ:—( ಹೊರಗಡೆ ನೋಡುತ್ತ ) ಯಾರು ಪಿಸುಗುಡುತಿಹರು.

( ಒಬ್ಬ ಸೇವಕನು ಬಂದು )

ಸೇವಕ:—( ಶಿರಬಾಗಿ ) ದಂಡನಾಯಕ ದೊರೆಯೆ !
ಸಮಯ ಕಾಯುತಲಿಹರು?

ತಿಮ್ಮ:— ಬಂದ ಕಾರಣವೇನು ?

ಸೇವಕ:—( ವಿನಯದಿಂದ ) ದೊರೆಗಳೇ ಮೊದಲಿಗಿವಿ ಕೇಳುವಂತಾಗಹನ !

ತಿಮ್ಮ:—ಹೀಗೆಯೇ! ಬರಮಾಡು.

( ನಮಿಸಿ ಸೇವಕ ಹೋಗುವನು, ದಂಡನಾಯಕ ಬಂದು ನಮಿಸುತ್ತ)

ದಂಡನಾಯಕ:—ನಮಿಸುವೆನು ದೊರೆಗಳಿಗೆ.

ತಿಮ್ಮ:—ಯಾವ ಗಹನವ ದಂಡನಾಯಕರೆ ತಂದಿಹಿರಿ ?

ದಂಡ:—( ಕೆಮ್ಮಿ, ಜ್ಞಾಪಿಸಿಕೊಂಡವನಾಗಿ )
ಸೆರೆಮನೆಯ ಸುತ್ತುವಾ ಸಮಯದಲಿ ನೆಲದೊಳಗೆ
ಪಡುವಣದ ನಿಟ್ಟಿನಲಿ ಕಾಲು ನೆಟ್ಟವು ಕುಸಿದು.

---

—ರಾಜ್ಯತೃಷ್ಣೆ

ಸಂಕೆಯಿಂದದು ನಾವು ನೆಲವನಗಿದೆವು ತುಂಬ.
ಆಶ್ಚರ್ಯ! ದೊರೆಗಳೇ, ಒಳದಾರಿ, ನೆಲದಾರಿ !!
ರಂಗರಾಯರ ಕೋಣೆಯಿಂದೊಂದು ಹೊರಟಂತ
ದಾರಿಸಿಕ್ಕಿತು ನಮಗೆ. ಒಂದು ತುದಿ ಸೆರೆಮನೆಗೆ
ಒಂದು ತುದಿ ಕೋಟೆ ಹೊರ ಗೋಡೆಗೆ ಹೊಸದಾರಿ
ತಿಳಿಸಲದು ಬಂದಿಹೆನು ಓಡುತ್ತ ದೊರೆಗಳೇ !!

**ತಿಮ್ಮ:**— ಜಗರಾಯ ನೋಡಿದೆಯೆ ಎಚ್ಚಮನ ಸಾಹಸವ !

**ಬಾಯಮ್ಮ:**—( ಅವಹೇಲನೆಯಿಂದ )

ಅವನ ಸಾಹಸಕೆಣೆಯ ಕಟ್ಟುವರು ನಾವಲ್ಲ.
ಜಗದ ಹೆಗಲಿನ ಮೇಲೆ ಕುಳಿತಿಹನು ಕಂತ್ರಜ್ಞ,
ನಾವೆಲ್ಲ ಹೆಣಗುವುದು ಕೋಳಿವಾಯನು ಕಟ್ಟಿ
ರವಿಯುದಯ ತಡೆದಂತೆ, ಬೈಲಬೆನ್ ಪಿಡಿದಂತೆ.
ಜಗರಾಯ, ಮೋಹಕ್ಕೆ ಮರುಳೋಗಿ ಸಿಂಹಾಸ-
ನಕೆ ನಾವು ಕಣ್ಬಿಟ್ಟು ಬೆಂಕಿ ತುಳಿದೆವು ಕೂಡು.
ನನ್ನ ಪಾಡಿನ ಹಾಡು ಕೇಡುಗಾಲಲ್ಲವೇ. ( ನಡುಗುವ ದನಿಯಿಂದ )
ಎಚ್ಚಮನು ಬಿಡಿಸುವನು ಅವರನೆಲ್ಲರ ಬಿಡದೆ
ಮರಳಿಗಳಿಸುವ ರಾಜ್ಯ. ನಾಯಕರೆ ! ಜಗರಾಯ !!
ಜಗರಾಯ, ಏಳಿನ್ನು. ಇದ್ದ ಬಿದ್ದುದ ಕಟ್ಟು,
ಮೇಲೇಳು. ಓಡು ನಡೆ. ಘೋರವನ ಸೇರು ನಡೆ.
ಉತ್ತರಾಶ್ರಮದಿಂದ ದಿನ ಕಳೆದು, ಜಪಿಸುತ್ತ
ಭಿಕ್ಷೆಯನು ಬೇಡುತ್ತ ಬದುಕೋಣ, ನಡೆನಡೆಯೊ

( ಹಣೆಹಣೆ ಹೊಡೆದುಕೊಂಡು )

ಹಾ ! ವಿಧಿಯೆ !! ಹೇ ದೈವ !!! ಈಸು ಕೊರೆದೆಯೆ ಫಣಿಗೆ ?
ತೂಗುಮಂಚದ ಮೇಲೆ ನಲಿದುಲಿದ ದೇಹಕ್ಕೆ,
ತಣುಪಾದ ತಾಣದಲಿ ತುಳಿದ ಕಾಲ್ಗಳಿಗಿನ್ನು

ದಾಸಿಯರ ದಂಡಿನಲಿ ಬೇಸರಿಲ್ಲದೆ ಬೆಳೆವ
ನನಗಿನ್ನು ವನವಾಸ ! ನನಗಿನ್ನು ವನವಾಸ !! (ಸೆರಗಿನಿಂದ ಕಣ್ಣೊರಸಿ)
ಎಲೆವನೆಯು ಅರಮನೆಯು. ಖಗಮೃಗವೆ ಕೆಳದಿಯರು.
ಗಿಡಮರವೆ ಚಾಮರವು ! ಎಳಗಾಯಿ ಮೃಷ್ಟಾನ್ನ !
ಮೇಲೆ ಮಿನುಗುವ ಚಿಕ್ಕೆ ನನ್ನ ಮನೆ ದೀಪ !
ಗಿಡದ ನೆಳಲಲಿ ಬಿದ್ದ ಸೊಪ್ಪೆನಗೆ ಸಜ್ಜೆವನೆ !
ಹಾ ದುಷ್ಟ ದೇವತೆಯೆ ! ಕರುಣೆ ಕೊನರದೆ ನಿನಗೆ!
ನನ್ನ ಸಂಕಟ ಕಂಡು ನಲಿಯ ಬೇಕೆಂದಿರುವಿ ? ( ತಿರಸ್ಕಾರದಿಂದ )
ಹೂ, ನಲಿಯೆ. ನಲಿನಲಿಯೆ ಕರ್ಕಶಳೆ. ಕಠಿಣಳೆ—
ಹೂ ಬರಲಿ. ಬರಲೆಂದೆ. ಏಳು ಜನುಮದ ದುಃಖ
ಬರಲೆಂದೆ. ನುಂಗುವೆನು. ಇವರುಗಳ ನೋಡುತ್ತೆ
ನುಂಗುವೆನು. ಇವರುಗಳ ನಂಬುತ್ತೆ ನುಂಗುವೆನು.
( ಆವೇಶವನ್ನು ನುಂಗಿಕೊಂಡು )
ರಂಗನಾ ಸುಡಿ ಕೇಳಿ ವರ್ಷಾಶನವ ಕೊಂಡು
ಗಿರಿಯ ಮೇಲೊಂದು ಹಾ (ಆಯಾಸವನ್ನು ಹಾ ಎಂಬ ಶಬ್ದದಿಂದ ಬಿಟ್ಟು)
ಗುಡಿಸಲವ ನಿರ್ಮಿಸುತ,
" ಹರಿಹರಿ, ಸಾಕಾಯಿತೀಜಗವು. ಪಾರುಗಾ–
ಣೆಂ"ದು ಮೊರೆಯಿಡುತ ನಾ ಬದುಕುವುದು ಒಳಿತಿತ್ತು.
ಈ ಬುದ್ಧಿ, ಏ ವಿಧಿಯೆ ಏಕೆ ಕೊಟ್ಟೆಹೆ ಹೇಳು ?
( ಎನ್ನ ಹತ್ತಿದಂತೆ ತನ್ನ ಮಗ ರಂಗನ ನೆನಪಾಗಿ, ಚಿಂತೆಯಿಂದ ಆವರಿಸಿಃತಾಗಿ )
ನನ್ನ ಜೀವದ ಜೀವ, ನನ್ನ ಮಮತೆಯ ಮುದ್ದಿ,
ಈ ರಂಗ, ಯಾರ ಮೊರೆ ಹೋಗುವುದು ? ಯಾರುಂಟು ?
ಯಾರಿಲ್ಲ. ಅವನೊಬ್ಬ ತಿರಿದುಂಬ ತಿರಿಕ.
ತಿರಿಪೆ ಕೂಳನು ತಿಂದು, ಧರ್ಮ ಶಾಲೆಯ ನಡುವೆ
ಮಲಗುವುದು ಹೀಗೆಯೇ ಒಂದು ದಿನ ಸಾಯುವುದು.

---

—ರಾಜ್ಯತೃಷ್ಣೆ

( ಸಿಟ್ಟಿನಿಂದ ಬೆರಳು ಮುರಿಯುತ್ತ )
ಅಯ್ಯೋ ಸಹಿಸಲಾರೆ. ಬಿರ್ರೆಂದು ತಲೆಬಿರಿದು
ಸಂಕಟವು. ನೆನೆಯಲದು ಮುತ್ತುತಿದೆ ಕತ್ತಲೆಯು.
ಜೀವ ಜಡವಾಗುವುದು. ಬಾಳಿನಲಿ ಬೆಲೆಯಿಲ್ಲ.

ಹರಣ ಹಾರುವದೆಂದು ? ಮರಣೆಲ್ಲಿ ಕುಳಿತಿಹುದು ?
ಜಗರಾಯ, ಮರಣವೇ ನನಗೊಳಿತು. ಮರಣೆಲ್ಲಿ ?
( ಎರಡು ಕೈಗಳಿಂದ ಮುಖ ಮುಚ್ಚಿಕೊಳ್ಳುವಳು. )

ಜಗರಾಯಃ—ಹುಚ್ಚು ಹಿಡಿಯಿತೆ ತಂಗಿ ? ಏನಿಂತು ನುಡಿಯುವುದು.
ಅಪಶಕುನ ನುಡಿಯದಿರು. ಎಚ್ಚಮನ ಹುಚ್ಚಾಟ—
ವಿಳಿಸುವೆನು. ತಾಳಿ ನಡೆ. ನಿನ್ನ ದಾರಿಯ ಮೇಲೆ
ಹರಡಿರುವ ಮುಳ್ಳುಗಳ ಕಿತ್ತಿ ಬಿಸುಡುವೆನೆಂದು,
ತಟ್ಟಿ ಸುಡಿಸುವೆನೆಂದು ತೂಗಿ ತಿಳಿ. ಓಬಲನೆ ( ಸಿಟ್ಟಿನಿಂದ )
ರಂಗನಾ ಕುನ್ನಿಯನು ಹುಡುಕಿ ತೆಗಿ. ಈರೈದು
ದಿಕ್ಕಿನಲಿ ಬಲೆ ಬೀಸಿ ಕರುವನ್ನು ಎಳೆದು ತೆಗೆ.

ಮೂರು ದಿನ ಸಾಕಿದಕೆ. ಸೆರೆಮನೆಯ ಕತ್ತಲಲಿ
ಕೊಳೆಯುತ್ತ ಬಿದ್ದಿರುವ ರಂಗನಾ ರಂಗವಲಿ
ರಕ್ತದಾ ರಂಗವಲಿ ಹೊಯ್ಯುವುದು ಸಂಜೆಯಲಿ.

ಅವರ ಹೆಣವನು ಕಂಡು ಇಂದೆನ್ನ ಊಟ.
ಅನತನಕ ಅನ್ನವನು ಮೂಸನೆಂದರಿಯುವುದು.
ಪಾಪಿ ತಿನ್ನಲಿ ತನ್ನ ಪಾಪ ವೃಕ್ಷದ ಫಲವ.
ಓಬಲನೆ, ಹಿಂದು ಮುಂದಾಗದಿರು ಕಟ್ಟಾಣೆ.

ಹೂ ನಡೆ. ನಡೆ ಮುಂದೆ. ನೆತ್ತಿಯಲಿ ನೆತ್ತರವು
ತಕಪಕನೆ ಕುದಿಯುವುದು. ಸೇಡಿನಿಂದದು ಮೈಯು
ಸುಡುತಿಹುದು. ಕೈಗಳದು ಕಂಪಿಸುತ ಕುಣಿಯುವವು.
ಮುಳ್ಳು ಮೊನೆಯೀಸು ಸಹ ಆಣತಿಗೆ ಭಂಗವನು

ತಾರದಿರು. ಹೂ ನಡೆ. ಕಡಿದೊಟ್ಟು ಬಣಬೆಯಲಿ.
ಶಮನವಾಗದು ಮನಕೆ. ಹೆಣ ನೋಡಿ ಶಾಂತತೆಯು.
ಹೂ ನಡೆ. ಕಾರ್ಯವನು ಕೈಕೊಂಡು ಓಡಲ್ಲಿ.
ಓಬಲನೆ, ವೈರಿವನ ಕಲಕಾಡು. ಹಾರಿ ನಡೆ
ತೂರಿ ನಡೆ. ಓಡು ನಡೆ.

( ಓಬಲನು ಹೋಗುವನು ಪರದೆಯು ಧೊಪ್ಪೆಂದು ಬೀಳುವುದು. )

---

— ರಾಜ್ಯತಪ್ಪೆ

# ಪ್ರವೇಶ ೪.

( ಸೆರೆಮನೆಯು. ರಂಗನು. ಅವನ ಹೆಂಡತಿ ( ಚಿನ್ನಮ್ಮ ), ಮಗ (ರಾಮು.) ಸೊಸೆ (ಸೀತೆ) ಮತ್ತು ಇನ್ನೊಂದು ತಿಂಗಳ ಚಿಕ್ಕ ಕೂಸು ( ಚಿಕ್ಕಮ್ಮ ) ಇಷ್ಟು ಜನರು ಕಾಣಿಸುವರು. ತುಂಬ ಹೊಲಸು. ತುಸು ತುಸು ಕತ್ತಲೆ. ಚಿಂತಾಕ್ರಾಂತರಾಗಿ ಕುಳಿತಿರುವಾಗ-)

ರಂಗಃ—ಏ ಮಡದಿ ( ಚಿನ್ನಮ್ಮನು ಹುಸಿನಗು ಬೀರುವಳು )
ಜೀವನದ ಪಾತ್ರೆಯಲಿ ಸೊನೆಯನ್ನು
ತುಳುಕಿಸಿದಿ. ನನ್ನ ಬಾಳಿನ ಬಯಕೆವಟ್ಟಲವೆ !
ಏ ಚೆನ್ನೆ, ಮದುವೆಯಾ ಮಂಟಪದ ಮೊದಲ ನಗೆ
ಜೀವನದ ಜೊನ್ನವನು ಹಿಡಿದಾಕಿ ತೆಗೆದಿಟ್ಟ
ರಸವಲ್ತೆ ? ಆ ನಗೆಯ ನೌಕೆಯನು ಸಂಸಾರ—
ಸಾಗರದಿ ನಡಿಸಿದೆವು ಮನದನ್ನೆ. ದೂಡಿದೆವು.
ನಮ್ಮ ಪ್ರೇಮದ ಸಾಕ್ಷಿ ಗ್ರಾಹಸ್ಥ್ಯತನಿರಸವೆ
ಮೈಗೊಂಡು ನಿಂತಿಹವು. ( ಉಸಿರುಗರೆದು )
ಸೆರೆಮನೆಯ ಮುಳ್ಳಿನ-
ಮೊನೆ ಮೇಲೆ ಹೊರಳುತಿವೆ, ನರಳುತಿವೆ, ನವೆಯುತಿವೆ.
ಸಂಕಟದಿ ಬಾಯ್ದೆರೆದು ಕುದಿಯುತಿವೆ.
( ತುಂಬಿ ಬಂದ ಕಣ್ಣುಗಳನ್ನು ಪಿಳುಕಿಸಿ )
ಮಕ್ಕಳನು
ನೋಡುತ್ತ ನಕ್ಕ ದಿನ ಜಾರಿದವು. ದುಕ್ಕವನು
ನೋಡಲ್ಕೆ ಜೀವವಿದೆ ದೇಹದಲಿ. ( ಶಾಂತನಾಗಿ ) ಏ ರನ್ನೆ,
ಬಿದಿ ಮುಂದೆ ಬೇಡಿದುದು ಇದುವೇನೆ ? ಬಂದಿಯಲಿ
ಉಸಿರೆಳೆವ ಗಂಡನನು ಬೇಡಿದೆಯೆ ? ಏ ಸಾಧ್ವಿ,
ನಿನ್ನ ಮರುಗನು ಕಾಣೆ. ಈ ಸ್ಥಿತಿಯ ನೋಡೆ.
ಮಲ್ಲಿಗೆಯು ಮೈಬಣ್ಣ ಕಂದಿಕಂದಿದೆ ಚೆಲುವೆ.

ಕಮಲ ಕಾಂತಿಯನೊಗೆವ ಬೆರಗುವಡೆವೀಯುಬ್ಬು-
ಕೆನ್ನೆಗಳು ಪಲ್ಗಳಲಿ ಸಿಕ್ಕಿ ಸುಕ್ಕಿವೆ ಮನ್ನೆ!
ಈ ನಿನ್ನ ರೂಪವನ್ನು ನೋಡಿ ನಡುಗುವೆ ಸತಿಯೆ!
ಮೀಸಲಂದವೆಯ ತೊಟ್ಟ, ಈ ಮೈಗೆ ಈ ವಸ್ತ್ರ!!
ಹಾ ಕಾಲ, ದುಷ್ಟ ದಿನ ನಿನಗಿನ್ನು ಹಿತವುಂಟೆ?
ಹೇ ದೇವ, ಮಾದೇವ! ಕುಲದೇವಿ ಚಾಮುಂಡಿ,
ಮರದೆಯೋ, ತೊರೆದೆಯೋ, ಅಭಯವರ ನೀಡುವೆಯೋ
(ಶಾಂತನಾಗಿ)
ಅವರೇನು ಮಾಡುವುದು? ನನ್ನದೇ ದುರ್ದೈವ!
ನನ್ನದೇ ದುರ್ದೈವ!! ತಾತ ವೆಂಕಟಪತಿಯು
ತೊಡರ ತೊಡಿಸುವ ಮೊದಲೆ— ಈ ರಾಜಮುದ್ರೆಯನು
ಕೈಗೆ ನೀಡುವ ಮೊದಲೆ-ಈ ಕನಸ ಕಂಡಿಹೆನು
ಅದಕಾಗಿ ಬೇಡೆಂದು ಹಟತೊಟ್ಟೆ. ಬಿದಿಬರೆಹ
ತಪ್ಪುವುದೆ? ಹಿರಿಯರಾಡಿದ ನುಡಿಗೆ ಮನಸೋತೆ (ಹೆಂಡತಿಗೆ)
ಹೇ ದೇವಿ ಈ ದೃಶ್ಯ ಹೇಗೆ ನೋಡಲಿ ಹೇಳು. (ಕೂಸಿನ ಬಳಿಗೆ ಹೋಗಿ)
ಉಪವಾಸದಿಂದ ಈ ಕೂಸುಂಟು ಮೂರ್ಛೆಯಲಿ
ಕಾಲುಗಳನ್ನೆತ್ತೆತ್ತಿ ಇದು ಒಗೆದು ಚೀರುವದು (ಮಗನಾದ
ರಾಮನನ್ನು ನೋಡಿ) ರಾಮಾ, ದೈನ್ಯದಿಂದದು ನನ್ನ ಯಾಕಿಂತು
ನೋಡುವೆಯೋ? ಹಡೆದ ತಂದೆಯು ನಾನು ಹೌದಲ್ಲೊ
ಪರಕಿಸುವಿ? ಅಹುದು. (ಅವನನ್ನು ತಬ್ಬಿಕೊಂಡು)
ನಿನ್ನ ಪಡೆದಿಹ ತಂದೆ—(ಗಲ್ಲಗಳನ್ನು
ಹಿಡಿದು) ಮಕ್ಕಳಿಗೆ ಸುಖಗುಡದೆ ಬಂದಿಯಾ ಬೇನೆಯಲಿ
ನವೆಯಲ್ಕೆ ಬಿಟ್ಟಿರುವ ಈ ಪಾಪಿ ತಂದೆಯೋ
ಅಹುದಹುದು. ಅಯ್ಯೋ ಕಣ್ಣೇಕೆ ಒಡೆಯವು!
(ಸಿಟ್ಟನಿಂದ ತಲೆಯ ಕೂದಲು ಹರಿದುಕೊಳ್ಳುವನು)

— ರಾಜ್ಯತೃಷ್ಣೆ

ಚಿನ್ನಮ್ಮ:—( ಸೆರಗಿನಿಂದ ಕಣ್ಣೊರಸಿಕೊಳ್ಳುತ್ತ )

ಬಿರುನುಡಿಯ ನಾಡದಿರಿ. ( ಬಿಕ್ಕುತ್ತ ) ಬಿರುನುಡಿಯನಾಡದಿರಿ.
ಎಲ್ಲವೂ ಅವನಾಟ. ನಾವು ಸೂತ್ರದ ಬೊಂಬೆ.
ದೈವವನು ಹಳಿಯದಿರಿ. ವಿಶ್ವವನು ನಿರ್ಮಿಸಿದ
ಸರ್ವಸಾಕ್ಷಿಯು ನಮ್ಮ ಮರೆಯಲಾರನು ನಿಜದಿ
ಅನತನಕ ಉಸಿರಿರಲಿ. ( ಕಣ್ಣಿನಿಂದ ಹರಿವ ಅಶ್ರುಜಲದಾರೆಯನ್ನು ಒರಸಿಕೊಂಡು ) ಇದನೆಲ್ಲ ಸುಖದಿಂದ
ಕಳೆಯುವುದೆ ಸೋಭನವು. ಸುಖವಲ್ಲವೇನು ? ( ರಂಗರಾಯನ ಸಮೀಪಕ್ಕೆ ಬಂದು ) ನಮ್ಮ ವಂಶವನೆಲ್ಲ ಒಂದೆಡೆಗೆ ಸೇರಿಸುತ
ಸೆರೆಮನೆಯ ಸಾಲೆಯಲಿ ಬಿಟ್ಟಿರುವ ದೇವನನು
ಹೊಗಳದಿರುವುದೆ. ಹೇಳಿ ? ನಿಮ್ಮ ಜತೆಯೊನ್ನನ್ನು
ಇರಿಸಿಹನು ಇಲ್ಲಿಲ್ಲಿ. ನಾನಂತು ಮನದಣಿಯೆ
ಅಚ್ಯುತನ ಗುಣಗಳನು ಕೊಂಡಾಡಿ ಕರೆಯುವೆನು
ಬಾಂದಳದ ಬಳ್ಳಿವನೆಯಿಂದಿಳಿದ ನಮ್ಮ ಪಾ-
ಲಿನ ಹಣ್ಣು ಕಹಿಯೊಗರು, ಹುಳಿ, ಕೊಳಕು, ಲೆಕ್ಕಿಸದೆ
ನಗುನಗುತ ಕುಯಿದು ತಿನ್ನುವುದೆ ಸುಖವೆಂದು ನಾ
ಅರಿತಿರುವೆ ಪತಿದೇವ. ( ರಂಗನ ಕೈಯನ್ನು ಮೆಲ್ಲಗೆ ಹಿಡಿದುಕೊಂಡು)
ಈ ಪರಿಯ ಬಿರುವಾತು
ಬಳಸುತ್ತ ನವೆದ ದೇಹಕೆ ತಿರುಗಿ ಮುಳ್ಳು ಮೊನೆ
ಚುಚ್ಚುವಂತಾಡದಿರಿ. ನನ್ನಾಣೆ ನಾಥ.

ರಂಗಃ—( ಅವಳ ಎರಡೂ ಕೈಗಳನ್ನು ಹಿಡಿದುಕೊಂಡು )

ನೀನೆಲ್ಲವಾಡಿದುದು ನಿಜವೆಂದು ನಂಬುವೆನು.
ಮಾಡಲೇನದು ಹೇಳು ? ದೇಹದೊಳಗಿರುವಂತ,
ಮನದೊಳಗೆ ನೆಲೆಸಿರುವ, ಅಭಿಮಾನದಲಿ ಸೇರ್ದ
ಸಿಟ್ಟಿನಲಿ ಸಿಡಿಮಿಡಿವ, ಸಂಕಟಕೆ ಕುದಿವಂದು
ಬಗುಳುವೆನು. ಇದುವೆನಗೆ ಅಸಕಳದು. ಎದೆಗುಂಡಿ

ಯಿಂದೊಗೆದ ಬಲ್ನಾಡಿ ನಡುವರಿಯೆ ನೆತ್ತರದ
ಪುಟಿಕೆಗಳನಾರು ತಡೆಯುವರು ? ಭೀಷಗಾರ್ಯೆ
ಕೈಯೂರಿ ಕೊಡುವನು ಇಂತ ಸಂಕಟವೆನಗೆ.
ಮನದನ್ನೆ, ನಿನ್ನ ಪಾಡಿನ ಹಾಡು ಒಂದೆಡಗೆ
ಇರಲಿರಲಿ. ಅವಳ ಮೊಗ ನೋಡಲ್ಲಿ ( ತನ್ನ ಸೊಸೆ ಸೀತೆಯು
ಕೈಮಾಡಿ ) ಸೀತೆಯು
ಮೊಗ ನೋಡೆ ?—ನಮ್ಮ ಕೈದೀವಟಿಗೆ, ನಮ್ಮ ಮೈ
ಕಳೆಯೆಲ್ಲ ಒಂದಾಗಿ ಪೊಳೆವುದೋ ಎಂತಿರುವ
ರಾಮನಾ ಮೋಹನದ ಮಡದಿಯನು, ನಮ್ಮ ಸೊಸೆ
ಸೀತೆಯನು ನೋಡು ? ಪಾಪವಳ ತಪ್ಪೇನಿಹುದು ?
ಏನರಿಯದಜ್ಞಾನಿ ಶಿಸುವದಕೆ ಸಂಕಟವು ( ಕಳವಳದಿಂದ )
ಬಸಿರುಂಟು ಸೀತೆಯು !!! ಐದು ತಿಂಗಳ ಬಸಿರು !
ವಸ್ತುವಡವೆಯ ಬಯಕೆ, ಉಣಿಸುತಿನಿಸಿನ ಬಯಕೆ,
ಸಾಕಂಬರೀ ಸೊಬಗ ಕಣ್ತುಂಬ ನೋಡುವ
ಬಯಕೆ, ತೀರ್ಥಯಾತ್ರೆಯ ಬಯಕೆಯುದು ಓರಗೆಯ
ಪೆಂಡಿರಲಿ ಆಡಿ ಪಾಡುವ ಬಯಕೆ, ಇಹುದಲ್ಲೆ ?
ಅವನೆಲ್ಲ ಹತ್ತಿಕ್ಕಿ ಒತ್ತಿಕ್ಕಿ ಕುಳಿತಿಹಳು (ಸಂಕಟದಿಂದ)
ಊರ ಹೊರ ಬಾಗಿಲಲಿ ವಾಸಿಸುವ ಬಡವೊಬ್ಬ
ತನ್ನ ಸೊಸೆ ಬಯಕೆಯನು ಕುಲವನೇ ಅಡವಿಟ್ಟು
ಸಲ್ಲಿಸುವ. ಅಸಮರ್ಥ, ಅಸಹಾಯ, ಅನಾಥ !!
ಅದಕಾಗಿ ಸುಡುತಿಹುದು ಅವಳ ಬಯಕೆಯ ಬೇಗಿ.
ನನ್ನಿಂದ ಸಲ್ಲಿಸಲು ಆಗದೆಂದರುಹುವೆನು.

—ರಾಜ್ಯತೃಷ್ಣೆ.

ಚಂಡಾಲ. ಕಟುಹೊಲೆಯು, ಪಾಪಿಮಾನವ ನಾನು
ಅಯ್ಯೋ! ಈ ಬಗೆಯು ಸಂಕಟವು ಅಸಾಧ್ಯ
ಮಾನವನ ಗಂಟಲಿಗೆ ಇಳಿಯಲ್ಕೆ ದುಸ್ಸಾಧ್ಯ !

(ಒಂದು ಮೂಲೆಯ ಕಡೆಗೆ ಹೋಗಿ ಮುಖ ಮುಚ್ಚಿಕೊಂಡು ನಿಲ್ಲುವನು.)

ರಾಮ:—(ಕಂಪಿಸುವ ದನಿಯಲ್ಲಿ) ತಾತನೇ !

ಚಿನ್ನಮ್ಮ:—(ಮುಖವನ್ನು ಸೆರಗಿನಲ್ಲಿ ಮುಚ್ಚಿಕೊಂಡು ಆಳುತ್ತ)
ಈ ಬಗೆಯ ನೆತ್ತರವ ಸೀದನುಡಿ
ಯಾಡದಿರಿ. ಕೇಳಿ ನಡಗುವೆ ನಾನು. (ಸೈನಿಕನೊಬ್ಬ ಬರುವನು)

ಸೈನಿಕ:— (ವಿನಯದಿಂದ) ದೊರೆಯೆ ?

ರಂಗ:—(ಅವನ ಬಲಕ್ಕೆ ಬಂದು) ಯಾರು ?

ಸೈನಿಕ:— ಸೇವಕನು ದೊರೆಯೆ ? ಇರುವಿರಾ ?

ರಂಗ:—ದೊರೆಯ ನಾಮವು ಮುಳುಗಿ ಬಹುದಿವಸ ಕಳೆದಿಹವು.
ಯಾಕಯ್ಯ ?

ಸೈನಿಕ:— ಚಿಕ್ಕದೊರೆ ಬಂದಿಹರು.

ರಂಗ:—( ಅತ್ಯಾಶ್ಚರ್ಯದಿಂದ ) ಯಾರೆಂದೆ ?

ಸೈನಿಕ:—ಚಿಕ್ಕದೊರೆ, ಓಬಲರು.

ರಂಗ:—(ಉದಾಶೀನತೆಯಿಂದ) ಓಬಲನೆ ? (ದರ್ಪದಿಂದ ಓಬಲನು ಬರುವನು)
ಯಾಕಯ್ಯ ?

ಓಬಲ:—(ಅಧಿಕಾರದಿಂದ) ಯಾಕಯ್ಯ ! ನಿನ್ನ ಕಿರಿಮಗುವೆಲ್ಲಿ ?

ರಂಗ:—(ತಡೆದುನಿಂತು, ಶಾಂತರೀತಿಯಿಂದ) ನಾನರಿಯೆ !

ಓಬಲ:—ಅರಿಗಿರಿಯ ಕೇಳುವೆನೆ ? ಯಾರ ಕೈಗವ ಕೊಟ್ಟೆ ?

ರಂಗ:—( ತೀರ ಶಾಂತನಾಗಿ ) ಗೊತ್ತಿಲ್ಲ.

ಓಬಲ:—(ತಿರಸ್ಕಾರದಿಂದ) ನೀನಿಲ್ಲದಿನ್ನಾರು ಮಾಡುವುದು
ಈ ಹೇಸಿ ಕೆಲಸವನು ?

ರಂಗ:—(ಗಂಡುದನಿಯಲ್ಲಿ) ನುಡಿಯದಿರು ಕೀಳುನುಡಿ.

ಓಬಲ:—(ನ್ಯಾಯ ಹೇಳುವವನಂತೆ) ಕೀಳ್ಗೆಲಸವಲ್ಲೇನು ? ಕೀಳುವಾನಿಸಮುಚ್ಚಿ
ಮಾಳ್ಪ ಕೆಲಸವು ತಾನೆ. ಕೀಳೆಂದು ಕರೆಯುವೆನು.

ರಂಗ:—(ಮುಖವನ್ನು ಇನ್ನೊಂದು ಕಡೆಗೆ ಮಾಡಿ) ನೀಚ...

ರಾಮು:—(ಮುಂದೋಡಿ ಬಂದು) ಏನೆಂದೆ, ಏನೆಂದೆ ಖಳನೆ ?
ಕರುಳುಗಳ ತೋರಣವ ಕಟ್ಟುವೆನು ಬಾಗಿಲಿಗೆ.
ಸಿರದ ಸೆಂಡನು ಮಾಡಿ ಒದೆಯುವೆನು ಹೊರಗೆ
ತೂಗಿನುಡಿ

ರಂಗ:—(ರಾಮುನ ಬೆನ್ನುತಟ್ಟಿ) ಮಗುರಾಮು ಸುಮ್ಮನಿರು. ತಾಳು.

ರಾಮು:—(ತಾತನ ಕೈಗಳನ್ನು ಬಿಡಿಸಿಕೊಂಡು)
ತಾತ ಬಿಡು. ನನ್ನಬಿಡು. ಖಳನ ಪೊಡೆಯನು ಹರಿದು
ನೆತ್ತರದ ಮಸಿಯಿಂದ ಚಿತ್ರವನು ಬರೆಯುವೆನು.

ರಂಗ:—(ಮೈಮೇಲೆ ಕೈಯಾಡಿಸುತ್ತ)
ಶಾಂತತೆಯು, ಶಾಂತತೆಯು. ಸರ್ವವನು ಸಹಿಸುವುದು.

ಓಬಲ:—(ಗರ್ವದಿಂದ) ನಿನ್ನ ಕಿರಿಮಗು ಚಿನ್ನ ಎಲ್ಲಿಹನು ? ಕೇಳುವುದು
ರಾಜದಂಡ. ಅದಕೆ ನೀ ಹೇಳುವುದು, ಉಳಿಯುವುದು.
ಇಲ್ಲದಿರೆ ಅನರ್ಥ.

ರಂಗ:—(ಇನ್ನೊಂದು ಕಡೆಗೆ ನೋಡುತ್ತ) ನಾನರಿಯೆ ಗೊತ್ತಿಲ್ಲ.

ಓಬಲ:—ರಾಜಶಾಸನ ಮೀರಿ ನಡೆಯುವುದು ಕಷ್ಟ.

ರಂಗ:—(ಪೂರ್ವದಂತೆಯೆ) ನಾ-ನ-ರಿ-ಯೆ.

ಓಬಲ:—(ದೈನ್ಯದ ದರ್ಪದಿಂದ) ಹೇಳುವುದು ಒಳಿತು ಎಲ್ಲಿರುವ ?

—ರಾಜ್ಯತೃಷ್ಣೆ

ರಂಗ:—(ಏನೋ ನಿರ್ಧರಿಸಿಕೊಂಡವರಂತೆ)

ಸಾಲುದೀಪದ ನಡುವೆ, ಭಕ್ತಗಣಗಳ ನಡುವೆ,

ನಗುವ ಆ ದೇವನನು ಕೇಳಿದರೆ ತಿಳಿಯುವುದು.

ಓಬಲ:—( ಸಿಟ್ಟಿನಿಂದ ) ಏನೇನು ?

ರಂಗ:—( ಅವನ ಕಡೆಗೆ ಎರಡು ಹೆಜ್ಜೆ ನಡೆದು ಹೋಗಿ )

ಏನಿಲ್ಲ. ಭಕ್ತರಕ್ಷಕ ದೇವ,

ಪಂಪಾಪತಿಯ ಕಡೆಗೆ ಹೋಗಿರುವ ನೆನ್ನೆದಿನ.

ಇದಕೆ ಮಿಕ್ಕಿದ ಮಾತು ಮೀಸಲಿದೆ ಕೇಳದಿರು.

ಓಬಲಃ—ಶಾಸನಕೆ ಒಳಗಾಗಿ ಮುಗುವನೊಪ್ಪಿಸು ನೀನು.

ರಂಗಃ—( ಬೇಸರಿಕೆಯಿಂದ ) ಆಪನನ್ನ ಕೈಮೀರಿ ಹಾರಿರುವ ನಭಕೆ

ಸಿಕ್ಕಲಾರನು ಸತ್ಯ. ( ಎಂದು ಒಂದು ಕಡೆಗೆ ಹೋಗಿ ಕೂಡುವನು )

ಓಬಲಃ— ಅನರ್ಥವಾಗುವುದು.

ರಂಗಃ—( ಅವನ ಮಾತಿಗೆ ಬೆಲೆಗೊಡದೆ ) ಹೆದರಿಲ್ಲ.

ಓಬಲಃ— ನರಕದಲಿ ನಡೆಯುವಾ ಘೋರಮಯ

ಕರ್ಮವೇ ಕುಣಿಯುವುದು ಕಣ್ಮುಂದೆ ನೋಡ.

ರಂಗಃ—(ತಾತ್ವಿಕ ದೃಷ್ಟಿಯಿಂದ )

ಮರಣಕ್ಕೆ ಮಾನವನು ಹೆದರುವನು ನಿಜದಿ.

ಅದಕೆ ನಾ ಹೆದರಿಲ್ಲ. ದಿನ ದಿನವು ಕರೆಯುವೆನು.

ಮೃತ್ಯುವಿನ ತುತ್ತೊಂದು ನಿನ್ನ ಬಳಿಯುಂಟೆ ?

ಓಬಲಃ—ಇದು ನೋಡು ರಾಜಾಜ್ಞೆ ( ಎಂದು ರಂಗರಾಯರ ಮುಂದೆ ತಾನು ತಂದ ರಾಜ್ಞೆಯನ್ನು ಒಗೆಯುವನು. ರಂಗನು ಅದನ್ನು ಕೈಗೆ ತೆಗೆದುಕೊಂಡು ಓದಿ-)

ರಂಗಃ— ಇಂತುಂಟೆ ಬಿದಿಬಯಕೆ ?

( ಎಂದು ಸಪ್ಪೆಯಾಗಿ ತಲೆ ಹಿಡಿದುಕೊಳ್ಳುವನು. )

ರಾಮು:—ಏನೆಂದು ಬರೆದಿಹುದು ತಂದೆಯೆ ?

ರಂಗ:—( ಅವನ ಕೈಗಿಟ್ಟು) ನೀನೋದು....
ಅಯ್ಯೋ, ಮಾನವನ ಕುಲರಕ್ತ ಒಂದಲ್ಲವೆ ?
ವಿಜಯನಗರದ ರಾಜ್ಯ ವಂಶವೃಕ್ಷದ ಒಂದು
ಕೊಂಬೆಯಲ್ಲವೆ ನಾವು ? ಪೂರ್ವಜರ ರಕ್ತಾಣು
ನಮ್ಮಿಬ್ಬರ ದೇಹದಲ್ಲಿ ಹನಿಯೊಂದು ಇರದೆ ?
ಇರುತಿಹುದು ಇರುತಿಹುದು ನಿಜವಾಗಿ ಇರುತಿಹುದು.
ಅದಕಾಗಿ ಹೆಣಗಿದೆವು ಸಿಂಹಾಸನಕೆ ಹಸಿದು.
ಆ ರಕ್ತ, ಪೂರ್ವಜರ ಆ ರಕ್ತ ಹೋರುತಿ-
ದ್ದಿತು ಮೊದಲು ಒಮ್ಮೊಗದಿ. ಈಗೇನು ನಡೆದಿಹುದು !
ಆರಕ್ತ ಈರಕ್ತ ಹೀರಬಯಸಿತೆ ದೇವ !?
ಆ ಹನಿಯು- ಒಬಲನು- ಹಾತೊರೆದು ನಿಂದಿಹನು.
ಸೇಡೆಂದು ಕೂಗುವನು. ಅನ್ಯಾಯ. ಅನ್ಯಾಯ!
ಮಾನವರು ಅಧಿಕಾರ ಜಾಲವನು ಹರವುತ್ತ
ಕಾಯದೆಯ ಗಾಳದಲಿ ಬಂಧಿಸುತ ಕೊಲುತಿಹರೆ ?
ಮನುಜರನು ! ಜಗದ ನೆತ್ತಿಯ ಮೇಲೆ ನಡೆದಿರುವ
ಈ ಘೋರಕಾರ್ಯ ಯಮಲೋಕದಲಿ ಕಾಣುವೆವೆ ?
ತಾಯಿ ಕೂಸಿನ ಕತ್ತು ಮೊಲೆಯೂಡಿ ಹಿಸುಕಿ,-
ಕೋಪದಲಿ ಪತಿಯನ್ನು ಸತಿಯು ದೂಡುತೆ ಹೊರಟು,
ಅಣ್ಣಾ ತಂಗಿಯ ನಂಬಿ ಅವಳ ಕೈ ಬಿಸನುಂಗಿ,
ಶಿಷ್ಯ ಗುರುಕನ್ನೆಯನು ಕಾಮುಕರ ಬಲಿಗಿಟ್ಟು
ಅರ್ಚಕನು ದೇವನನು ಸುಡುಗಾಡಿಗೆಸೆದು

ಬಿಡುವ ಪಾತಕವಿಂದು ಇನ್ನೆಲ್ಲಿ ಕಾಣುವುದು ? (ಮಗನ ಕಡೆಗೆ ಬಂದು)
ಓದಿ ನೋಡಿದೆ ಮಗನೆ ? ದೇವ ಕಳುಹಿದ ಆಜ್ಞೆ
ಓದಿ ನೋಡಿದೆ ರಾಮು ? ನಕ್ಕೊಮ್ಮೆ ದೇವನನು
ಮನದಣಿಯೆ ಸ್ಮರಿಸುತ್ತ ಮರಣವನು ಮುದ್ದಿಡುವ.

ಚಿನ್ನಮ್ಮ:—( ಉತ್ಸುಕತೆಯಿಂದ ) ಈಗ ಬಂದಿತೆ ಸಾವು ?

ರಂಗ:—( ವಿಕಾರದ ನಗೆಯಿಂದ ) ಸಾವಲ್ಲ. ದೇವ !
ತೋಷದಲಿ ಬರಮಾಡಿ ಕಾಣಿಕೆಯ ಸಲಿಸೋಣ.
ನಮ್ಮ ದೇಹದ ಬಿಸಿಯ ನೆತ್ತರವ ತೆಗೆದು
ನೈವೇದ್ಯವೆಂದಿಟ್ಟು ನಗುನಗುತೆ ನಲಿವಾ.

ಓಬಲ:—ಕಟುಕರೇ! ಒಳಬನ್ನಿ. ದಿಂಡನಿಳಿಸಿರಿ ಕೆಳಗೆ (ಕಟುಕರು ಬರುವರು)

ರಾಮು:—ಯಾರಿಲ್ಲಿ ಬರುವವರು, ಗಂಡಸನೊ, ಸಂಡನೋ ?
ಜೀವವನು ಸಂಚಿಟ್ಟು ಕಾಲಿಡಲಿ. ( ಕಟುಕರು ಹಿಂದಕ್ಕೆ ಸರಿಯುವರು )

ರಂಗ:—( ರಾಮುವನ್ನು ಹಿಡಿದುಕೊಂಡು ) ತಾಳು ಮಗು.

ಚಿನ್ನಮ್ಮ:—ಕೊಲೆಗಡಿಕರೇಕಿಲ್ಲಿ, ಪ್ರಾಣೇಶ ನೀವಿರಲು ?
ಅವರ ಕರವಾಳಕ್ಕೆ ತಲೆಗೊಟ್ಟು ಸಾಯುವುದೆ ?
ಏಸು ಪಾಪಿಯ ರಕ್ತ ಮೂಸಿಹುದೆ ಕಾಣೆನ್ನೆ
ಪುಣ್ಯಮಯ ನಿಮ್ಮ ಕಡುಗ ನಕ್ಕಲಿ ನಮ್ಮ
ಕೊರಲ ಕೆನ್ನೀರು.

ರಂಗ:—( ಚಿನ್ನಮ್ಮನನ್ನು ಅಪ್ಪಿಕೊಂಡು )
ಎಲೆಗೆ ಸತಿ, ಸಾಯುವಾ
ಸಮಯದಲಿ ಅಭಿಮಾನ, ಕುಲಕೀರ್ತಿ, ಪಾವಿತ್ರ್ಯ,
ಗೌರವದ ವ್ಯವಹಾರ ಕಾಯ ಬಯಸುವೆ ಜಾಣೆ !

( ತುಂಬಿಬಂದ ದುಃಖದಿಂದ )
ಅಯ್ಯೋ.... ಈ ಪುಣ್ಯಮೂರುತಿಗೆ ಕಡೆಗಾಲ
ಕೊಲೆಗಡಿಕ ನಾನಾಗಬೇಕೆ? ಹೇವಿಧಾತಾ !!

ಓಬಲಃ— ಕಟುಕರೇ ! ಹೊತ್ತು ಬಹಳಾಗಿಹುದು. ರಾಜಾಜ್ಞೆ ಮೀರುವುದು.

ಕಟುಕರುಃ— ( ಅವಸರಿಸುತ್ತ ) ರಂಗದೊರೆ ಸಜ್ಜಾಗು.

ರಂಗಃ— ( ಅವರನ್ನು ತಡೆಯುತ್ತ ) ನಿಮಗೇಕೆ
ಈ ಶ್ರಮವು. ನಾವು ಮಾಡುವ ಕಜ್ಜ ನೋಡುತಿರಿ.—
ಗಿರಿಯ ಮೇಲದು ಹುಳಿತ ಗಿರಿರಾಯನಂತೆ. ಮಗು.
ಮರಣಕ್ಕೆ ಮೊದಲಿಗೇ ಐಕ್ಯತ್ತು ನೀನಾಗು.
ಜನನಮರಣವ ಮೀರಿ ಮೊರಗಿಡುವ ದೇವನನು
ನೆನೆ ಮನದಿ ಇಷ್ಟಾರ್ಥ ನೀಡೆಂದು ಬೇಡು ಗಡ.

ಚಿನ್ನಮ್ಮಃ— ಸಾಕ್ಷಾತು ದೈವವೇ ನೀವಿರಲು ಮತ್ತಾವ
ದೇವನನು ನೆನೆಯುವುದು ? ದುಕ್ಕದುರಿ ನಂದಿಸುವ
ಅಧಿಕಾರ ನಿಮಗುಂಟು. ( ಸೊಸೆಗೆ ), ನಮಿಸಮ್ಮ ಹಿರಿಯರಿಗೆ.
ರಾಮಾ, ಚರಣಧೂಳಿ ನೆತ್ತಿಗಿಡು. ಬಲಗೊಂಡು
ನಿಲ್ಲೋಣ. ಬಿಕ್ಕದಿರಿ. ಬಿಕ್ಕದಿರಿ.

( ಸೊಸೆಯು ಚಿನ್ನಮ್ಮನಿಗೆ ನಮಸ್ಕರಿಸುವಳು. ಚಿನ್ನಮ್ಮನು ಅವಳನ್ನು ತಬ್ಬಿಕೊಂಡು, ಕಣ್ಣೊರಸುತ್ತ ) ಏಳಮ್ಮ
ಸೊಸೆಮುದ್ದು ನಿನ್ನ ಮೊಗದಾವರೆಯ ನೋಡಿದರೆ
ಅಳಲುತೊರೆಯುಕ್ಕುವುದು. ಕಣ್ಣೀರು ಕೋಡಿಯಲಿ
ಒಡೆಯುವವು. ಬೇಡಬೇಡಾಭಾಸ. ನುಂಗುವೆನು
ಆ ದುಕ್ಕ ನುಂಗಿದೆನು.

— ರಾಜ್ಯತೃಷ್ಣೆ

( ರಾಮನು ತಾಯಿಯನ್ನು ಅಪ್ಪಿಕೊಳ್ಳುವನು. ಚಿನ್ನಮ್ಮನ ದುಃಖವು ಒತ್ತರಿಸಿ ಬರುವದು. ಎಷ್ಟು ತಡೆಯ ಬೇಕೆಂದರೂ ನಿಲ್ಲುವದಿಲ್ಲ. ಬಿಕ್ಕಿ ಬಿಕ್ಕಿ ಅಳುವಳು. ಕೆಲಹೊತ್ತು ಹೀಗೆ ನಡೆದ ಮೇಲೆ ನಿಲ್ಲಿಸಿ, ಕಣ್ಣೊರಸಿಕೊಂಡು ರಾಮನ ಮುಖವನ್ನು ತನ್ನ ಮುಖಕ್ಕೆ ಒತ್ತಿಕೊಂಡು )

ಮಗುರಾಮ, ಜೀವಾ

ನನ್ನ ಪ್ರೇಮದ ಸೆಲೆಯು ಹುಲಿಯಾಗಿ ಹುಟ್ಟುತ್ತ
ಇಲಿಯಾಗಿ ಸಾಯುವುದು. ರಾಮಾ, ಅನ್ಯಾಯ.
ಜಗಕೆಂದು ಬಲಿಯಾಗಿ ಸಾಯೋಣ ಸುಮ್ಮನಿರು.
ಮೋಹಬಿಡು. ಹರಿದೊಗೆ ....ಸಾವಿಗದು ಸಾಗೋಣ.

( ಮುದ್ದು ಕೊಡುವಳು ) ಮರಣದಾ ಸೋಪಾನವೇರಿದರು ಮುದ್ದಿನಲಿ
ಮಾಯವಿದೆ. ಮೋಡಿಯಿದೆ. ಸೊಗಸುಂಟು ಸವಿಯುಂಟು

( ತನ್ನ ತೀರ ಚಿಕ್ಕ ಮಗು ಚಿಕ್ಕಮ್ಮ ಒಂದು ಮೂಲೆಯಲ್ಲಿ ಕಾಲು ಹೊಸೆದಾಡುತ್ತಿರುವದು. ನೋಡಿ ) ಚಿಕ್ಕಮ್ಮನಾಡುವಳು ಮೂಲೆಯಲಿ ಮಲಗುತ್ತ

ಆವಳಿಗೆಲ್ಲಿಯ ಭಯವು. ಬಾ ಮಗುವೆ ಚಿಕ್ಕಮ್ಮ ( ಎಂದು ಹೋಗಿ ಎತ್ತಿ ಎದೆಗೆ ಒತ್ತಿಕೊಂಡು ) ಹೋಗುವೆವು ಹೊರಗಿನ್ನು ಈ ಲೋಕದಾಟಿ.

ನನ್ನ ಬಸುರಿನ ಬೇನೆ ಬೆಲೆಗಾಣದಾಯ್ತು.
ಎಳೆಮಗುವೆ, ಚಿಕ್ಕಮ್ಮ ನಿನ್ನ ನೆತ್ತಿಗೆ ಎಣ್ಣೆ
ಜಗವೆ ಹಾಕಲಿ ಮುನ್ನ (ಕಣ್ಣೊರಸಿಕೊಂಡು) ಹೋಗುವೆನು.

ಹೋಗುವೆವು-

( ಎಂದು ಮುದ್ದಿಟ್ಟು, ಆಯಾಸದಿಂದ ಕೆಳಗಿಳಿಸಿ )
ಹರಿದೊಗೆದು ನಿಂತಿಹೆವು ಈ ಲೋಕ ಬಂಧನವ.
ಪತಿರಾಯ, ನಮಿಸುವೆನು ವರನೀಡು. ಅಭಯವರ
ನೀಡೆನಗೆ. ಶಿರದ ಮೇಲಿರಲಿ ವರದ ಹಸ್ತ.
ಸೂರ್ಯಚಂದ್ರರ ಬೆಳಕು ಬ್ರಹ್ಮಾಂಡದೊಳಗೆಯೆ
ಇರುವನಕ ನೀನೆನಗೆ ಪತಿದೇವ. ಪತಿದೇವ.

ಭೂತಾತ್ಮನೇ ಸಾಕ್ಷಿ. ಚಿನ್ಮೂರ್ತಿಯೇ ಸಾಕ್ಷಿ. (ರಾಮು, ಸೀತಮ್ಮರ ಬಳಿಗೆ ಹೋಗಿ) ಶ್ರೀರಾಮು, ಸೀತಮ್ಮ ಮನದ ಬಯಕೆಯ ಬೇಡಿ. (ಅವರು ಕೈಮುಗಿಯುವರು)

ಕಡುಗವೆತ್ತಿರಿ ಮೇಲೆ ನಡುಗದೆತ್ತಿರಿ ಮೇಲೆ
ಏಕ ಪ್ರಘಾತಿಗೇ ಈ ಲೋಕ ಬಿಡಿಸುವುದು.
ಸಾಲಾಗಿ ನಿಲ್ಲಿ. ಹೂ. ಪತಿದೇವ ಕೊಯಿದುಬಿಡು.

(ಸಾವಿನ ಸಂಗಡ ಆಡುವವರಂತೆ ಸಿದ್ಧಳಾಗಿ ನಿಲ್ಲುವಳು.)

ರಂಗ:—ಓಬಲಾ! ಎದೆಯುಂಟೆ ನಿನಗೆ?

ಓಬಲ:—(ಸೊಕ್ಕಿನಿಂದ) ಮಾತೇಕೆ!
ಗಳಿಗೆ ಹಾರಿತು ವ್ಯರ್ಥ. ರಾಜಾಜ್ಞೆ. ರಾಜಾಜ್ಞೆ.

ರಂಗ:—(ಚಿನ್ನಮ್ಮನನ್ನು ಗಾಢವಾಗಿ ಆಲಿಂಗಿಸಿ.)
ಹೇಗೆ ಹೊಡೆಯಲಿ ಸತಿಯೆ? (ಅವಳ ಮುಖವನ್ನು ಮೇಲೆತ್ತಿ)
ಬಾಳೆಂಬ ಕಡಲಿನಲಿ
ಕೈಕೈಯ ಕುಣಿಸುತ್ತ ಈಜಿದೆವು ನಗುನಗುತ;
ಎದೆಎದೆಯ ಮುತ್ತಿಟ್ಟು ಕಟ್ಟಿದೆವು ದೇಹಗಳ;
ದೈವ ಧರ್ಮದ ಮುಂದೆ ಜೀವನದ ಹಣತೆಯಲಿ
ಪ್ರೇಮರಸವನು ಸುರಿದು ಬೆಳಗಿದೆವು ಆರುತಿಯ.
ನನ್ನ ಕಾಲಲಿ ಮುರಿದ ಮುಳ್ಳ ನೀ ಕಿತ್ತಿರುವೆ.
ನಿನ್ನ ಮನದಲಿ ನಟ್ಟ ಮುಳ್ಳ ನಾ ತೆಗೆದಿರುವೆ.
ಕೈಗಳನು ಕುಲುಕಿಸುತ, ಮೈಗಳನು ಪುಲುಕಿಸುತ
ರಾಗರತಿರಂಗದಾ ತರಂಗಸರವನು ಹೆಣೆದು
ಸಂಸಾರ ಶ್ರೀರಾಗ ಹಾಡಿದೆವು ಚೆಲುವೆ!
ಒಂದೆ ಜೀವಕೆ ಚಿಗಿದ ಈ ನಾಲ್ಕು ಕೈಗಳು
ಒಂದೆ ಕೆಲಸವ ಸತತ ಮಾಡುತ್ತ ಬಂದಿಹವು.
ಈಗೆಂತು ಹೊಡೆಯುವುದು. ಕೆಯ್ಯೆನೆಗಪದು ಮೇಲೆ

ಚೆನ್ನೆಯೇ ! ಈ ಕೈಯು, ಅನ್ನ ಹಾಕಿದ ಕೈಯು
ಮುದ್ದಾಡಿಯೆತ್ತಿರುವ, ನಲಿದುಲಿದು ಆಡಿರುವ,
ಧರ್ಮ ಸಾಕ್ಷಿಗೆ ಒಡಿದ ಕೈಯಿಂದ ಹೊಡೆಯುವುದೆ !
ಏನು ಮಾಡಲಿ ಹೇಳೆ ? ಮನದನ್ನಿ ! ಏ ಸನ್ನೆ !!
(ಎಂದು ಆವಳ ಕೈಗಳನ್ನು ಅಲುಗಾಡಿಸುವನು.)

ಓಬಲಃ—ಒಳಬನ್ನಿ ಕಟುಕರೇ !

ಚಿನ್ನಮ್ಮಃ—(ದೈನ್ಯದಿಂದ) ಬೇಡ ಬಲ. (ರಂಗನಿಗೆ) ನಡುಗದಿರಿ.
ಸಗ್ಗದಾ ಬಾಗಿಲವು ತೆರೆದಿಹುದು. ಕರೆಯುವರು
ಅಪ್ಸರರು. ಗಂಧರ್ವ ನಡೆಸಿಹರು ಮಧುರವಾ—
ದಾಲಾಪ. ಕಿನ್ನರರು ಕಿಂದರಿಯ ಮೀಟುವರು.
ಸುರಗಣವು ಬೊಗಸೆವೂ ಬಿಡುತಿಹುದು ಬಾನಿನಲಿ.
ಹಾರುತಿಪ ದೇವದೂತರು ತಂದ ನಡೆಮಾಡ
ಮಣ್ಣು ಕುಡಿಕೆಯ ನೊಡೆದು ಹಾರಿಸಿರಿ ಹಲ್ಲಣಪ
ಬೇಗ ಬೇಗನೆ ನಾಥ. ಸೆರೆಮನೆಯ ಸಹವಾಸ
ಬೇಗ ನೀಗಿಸು ನಲ್ಲ. ತಡೆ ತಡೆದು ಎಡವದಿರು.

ರಂಗಃ—(ಅವಡುಗಚ್ಚಿ) ಓಬಲನೆ !....

ಚಿನ್ನಮ್ಮಃ— ಪಾಪಿಯುಪ. ಶ್ರೀಪತಿಯ ಹೆಸರೆತ್ತಿ.

ರಂಗಃ—ಬ್ರಹ್ಮಾಂಡನಾಯಕನೆ, ವಿಶ್ವಪಾಲಕದೇವ (ಕೈಮುಗಿದು)
ಧೈರ್ಯವನು ನೀಡೆನಗೆ. ಹೇಸಾಧ್ವಿ ! ಮೊಗ ಚಾಚು
ಮುತ್ತಿಡುವೆ ಮನದ ಮಲವನು ರತಿಯೆ ಈ ಮುತ್ತು
ತೊಳೆಯುವುದು. (ಮುತ್ತಿಟ್ಟು)
ಹಾ ಸೌಖ್ಯ. ಸುಳಿಯಾಗಿ ಸುತ್ತುವುದು.
ಏ ಹೆಣ್ಣೆ ! ಮೋಹಕಳೆ ಸಾಲದನು ಧೈರ್ಯ !!

ಚಿನ್ನಮ್ಮಃ—ಇದು ಹೇಗೆ ಅಳುಕುವಿರಿ ? ಬೆಚ್ಚುವಿರಿ ! ? ಬೆದರುವಿರಿ !!
ಕಾಲ ಕಳೆಯಿತು ಬರಿದೆ. ಹಾರಿಸಿರಿ ಮಣ್ಣುಂಡೆ.

**ರಂಗಃ**—( ತೊದಳಿಸುತ್ತ ) ಏ ರಾಣಿ !

**ಚಿನ್ನಮ್ಮ**ಃ—(ರಂಗರಾಯನ ಕೈಗಳನ್ನು ಹಿಡಿದು ಆತನ ಮುಖ ಪರೀಕ್ಷಿಸುವವರಂತೆ)
ಯಾಕಿಂತು ಅಂಜುವಿರಿ ?

ರಂಗ:—(ನಡಗುವ ದನಿಯಿಂದ) ಧೈರ್ಯ !

**ಚಿನ್ನಮ್ಮ**:—( ಪೂರ್ವದಂತೆಯೇ )

ಧೈರ್ಯವೇತಕೆ ಬೇಕು, ಮಾಂಗಲ್ಯದೊಡೆಯ ?
ಇಲ್ಲಿ ನಡೆದುದುವೆಲ್ಲ ಕನಸೆಂದು ಕಾಣುವುದು.
ನಮ್ಮ ನಾಡಿಗೆ ನಾವು ತೆರಳೋಣ ನಲ್ಲ.
ಸ್ವರ್ಗದಲಿ ನಮಗಾಗಿ ಕಟ್ಟಿಹುದು ರಾಜ್ಯ.
ನಿಮ್ಮ ದಾರಿಯ ದೇವ ನೋಡುತ್ತ ನಿಂದಿಹನು.
ಬೇಗ ನಡೆಯದು ರಮಣ (ರಂಗರಾಯನ ಮುಖದ ಮೇಲೆ ಕೈಯಾಡಿಸಿ).
ಧರೆಯ ಶಿಖರದ ಕಡೆಯ
ಮೆಟ್ಟಿಲಿಗೆ ಬಂದಿಹೆವು. ಇದರ ಮುಂದಿನ ಹೆಜ್ಜೆ
ಸ್ವರ್ಗಸಿಂಹಾಸನದ ಮೇಲಿಹುದು. ಈ ಬಾಳ
ಕಡೆಯುಸಿರು ಮೂರುಂಟೊ, ನಾಲ್ಕಿಹವೊ ! ? ಐದನೆಯ
ಉಸಿರನ್ನು ನಾಕದಲಿ ಎಳೆಯೋಣ. ಹಾರಿಸಿರಿ.
ಈ ಭೂಮಿಯೀ ಮಣ್ಣು ಉರುಳಿಸಿರಿ ಕೆಳಗೆ.

ರಂಗ:—ಏ ! ಚೆಲುವೆ !!

**ಚಿನ್ನಮ್ಮ**:— ಹಾಳು ಬಾಳಿನ ಬಾಸೆ ಬಳಸದಿರಿ.
ಸಗ್ಗವನು ಸೇರುತ್ತ ಸಗ್ಗನುಡಿ ನುಡಿಸೋಣ.
ಒಂದು ಅಕ್ಕರವಿನ್ನು ನುಡಿಯದಿರಿ. ನನ್ನಾಣೆ !
ನೋಡಿ ! ಆ ಆಗಸದಿ ನಡೆಮಾಡ ಎಡಬಿಡದೆ
ಹಾರುತಿದೆ. ಅಚ್ಚರಿಯರೆಚ್ಚರಿಲ್ಲದೆ ಕುಣಿದು

---

—ರಾಜ್ಯತೃಷೆ

ನಮ್ಮ ಬಾಳಿನ ಅಗ್ಗಳಿಕೆ ಹಾಡುತಿಹರಲ್ಲಿ
ಹೊಡೆನಲ್ಲ. ಕಡಿನಲ್ಲ. ಹೊಡೆದುಬಿಡು ಹೂ ಹೂ.

(ಎಂದು ಶಿರಬಾಗಿ ನಿಲ್ಲುವಳು. ಅವಳಂತೆ ರಾಮನು, ಸೀತೆಯೂ ನಿಲ್ಲುವರು. ಅವರ ಸಿದ್ಧತೆಯನ್ನು ನೋಡಿ)

ರಂಗ:—(ಮುಗಿಲನ್ನು ಉದ್ದೇಶಿಸಿ)

ಪರಮಾತ್ಮ! ಈ ಕಾರ್ಯ ನಡಿಸುವವ ನೀನೆಯೆ ?
ಪೀತಾಂಬರಧಾರೀ! ಪರಬ್ರಹ್ಮ! ಪಶುಪತಿಯೆ!
ಗರುಡವಾಹನ ಕೃಷ್ಣ ! ಮುರಮರ್ದ ! ಮುರಾರಿ !
ಆನಂದ ! ಅಚ್ಯುತನೆ ! ಚಿನ್ಮಯ ! ಚಿರಂಜೀವಿ !
ನಿನ್ನ ಮಕ್ಕಳ ದುಗುಡ ಪರಿಹರಿಸಿ ಕಾಪಾಡು
ಇಹಲೋಕ ದುಕ್ಕವನು ಪರಲೋಕ ಸುಖವಾಗಿ
ಸ್ವರ್ಗರಾಜ್ಯಕೆ ನಮ್ಮ ಬರಮಾಡು ರಕ್ಷಕನೆ ?

( ಕಣ್ಣು ಮುಚ್ಚಿ ಪ್ರಾರ್ಥಿಸುವನು. ಕೆಲ ನಿಮಿಷ ಹಾಗೇ ನಿಲ್ಲುವನು. ಕಣ್ಣು ತೆರೆದು ಸುತ್ತಲೂ ನೋಡುವನು. ಖಡ್ಗವನ್ನು ಒರೆಯಿಂದ ಹಿರಿದು ಝುಳಪಿಸಿ, ಅವಡುಗಚ್ಚಿ ಹೂಎಂದು ಒಮ್ಮೆಲೆ ಆವೇಶ ತುಂಬಿದವನಾಗಿ ಖಡ್ಗ ಪ್ರಹಾರ ಮಾಡುವನು. ರುಂಡಗಳು ದೇಹದಿಂದ ಕಳಚಿ ಬೀಳುವವು. ರಕ್ತವೆಲ್ಲ ರಂಗನ ಕಡೆಗೆ ಚಿಮ್ಮುವದು. ರಕ್ತಸ್ನಾನ ಮಾಡಿದಂತೆ ಅವನ ಬಟ್ಟೆಗಳೆಲ್ಲ ನನೆದು ಹೋಗುವವು ದಿಂಡಗಳು ರಂಗನ ಕಾಲು ಹಿಡಿಯಬರುವಂತೆ ಗುಡುಗುಡು ಉರುಳುತ್ತ ಅವನ ಕಡೆಗೇ ಬರುವವು. ಎರಡನ್ನು ಕೈಗಳಿಂದ ಹಿಡಿದುಕೊಂಡು )

ಕಾಲೇಕೆ ಹಿಡಿಯುವಿರಿ ? ಏ ಮಡದಿ, ಏ ಮಗನೆ ?
ಕಾಲೇಕೆ ಹಿಡಿಯುವಿರಿ ? ಸೀತಮ್ಮ, ಯಾಕೆ ಪಾಪಿಯ
ಹಿಡಿವೆ ? ಕಾಲೇಕೆ ಹಿಡಿಬರುವೆ ? ತಾಯೇ !
ಪುಣ್ಯಲೋಕವ ಸೇರ್ದ ಪುಣ್ಯವಂತರು ನೀವು.
ಇದೊ ಬಂದೆ. ಇದೊ ಬಂದೆ ನಾನಲ್ಲಿ ಬಂದೆ !

ದೇವ ದೇವನ ಪಾದ ಹಿಡಿಯಲ್ಕೆ ಹೋಗೋಣ (ಎನಲು ಅಷ್ಟರಲ್ಲಿ ಅವುಗಳ ಚೇತನವು ಕಡಿಮೆಯಾಗುವುದು. ಅವುಗಳನ್ನು ಬಿಟ್ಟು ಎದ್ದು ನಿಲ್ಲುವನು. ಖಡ್ಗವನ್ನು ಬಿರಬಿರನೆ ನೋಡಿ)

ಈ ಖಡ್ಗ, ನಿಮ್ಮ ಎದೆಯನು ಕಂಡ ಈ ಕೈದು
ನಿಮ್ಮ ನೆತ್ತರವುಂಡ ಈ ಕಾಳಶಸ್ತ್ರ
ನನ್ನ ಎದೆ ಮುದ್ದಿಡಲಿ (ಹವೆಯಲ್ಲಿ ಅದನ್ನು ತಿರುಗಿಸಿ)
ಹಾ ರಾಮ, ಹಾ ರಾಮ (ಎಂದು ಬೇಗನಾಗಿ ಎದೆಯಲ್ಲಿ ಚುಚ್ಚಿಕೊಳ್ಳಲು, ದೇಹವು ನೆಲಕ್ಕೆ ಉರುಳುವುದು. ಓಬಲನ್ನು ನೋಡುತ್ತ ನಿಂತಿರುವನು. ಮುಖದ ಮೇಲೆ ಯಾವ ಬಗೆಯ ಕಳೆಯಿಲ್ಲ. ಕಟುಕರು ಒಂದು ಕಡೆ ಬೆದರಿ ನಿಂತಿರುವರು. ರಂಗರಾಯನ ಧಡವು ನೆಲದ ಮೇಲೆ ಬೀಳಲು ಓಬಲನು 'ಹಾ' ಎಂದು ಎಚ್ಚತ್ತು ವಿಕಟಹಾಸ್ಯಗೈದು.)

ಓಬಲ:—ವೈರಿಗಳ ಕಾಡುವನ ಧಗಧಗಸಿ ಭಸಿತಾಯ್ತು (ಚಿಕ್ಕಮ್ಮ ಒಂದು ಕತ್ತಲೆಯ ಮೂಲೆಯಲ್ಲಿ ಮೆಲ್ಲಗೆ "ಗಂಗಾ" ಮಾಡುತ್ತ ಕಾಲು ಒಗೆಯುತ್ತಿರುವದು. ಅದನ್ನು ನೋಡಿ)

ಉಳಿದಿಹುದು ಈ ಗುಳ್ಳಿ. ಒಡೆಯುವೆನು. (ಕಟುಕರಿಗೆ)
ಕಟುಕರೇ!
ನಂದಿಸಿರಿ ಇವಳ ಜೀವಜ್ಯೋತಿ. (ಎಂದು ಆ ಗೂಸಿನ ಕಡೆಗೆ ಹೋಗುವನು)

ಕಟುಕರು:—(ಕಂಪಾಯಮಾನರಾಗಿ) ದೊರೆಗಳೇ!
ನಮಗೆ ಮೀರಿದ ಮಾತು! (ಕೈ ಮುಗಿಯುವರು)

ಓಬಲ:—(ಬೆಕ್ಕಸಬಟ್ಟು) ಮೀರಿದ್ದು ನಿಮಗೆ!

ಕಟುಕರು:—(ಕಟ್ಟಿದ ಕೈಗಳನ್ನು ಬಿಚ್ಚಿ)
ಹಾಳು ಹೊಲೆ ಮಕ್ಕಳರು ನಾವುಂಟು ... ನ
ಜನ್ಮದಲಿ ಈ ಘೋರ ಕಾರ್ಯವನು ನೋಡಿಲ್ಲ!
ಕೇಳಿಲ್ಲ ದೊರೆಯೋ!! ಅಯ್ಯೋ (ನಡುಗುತ್ತ) ಇದ ನೋಡಿ
ಎದೆ ನಡುಗಿ, ಬಾಯೊಣಗಿ, ಮೈ ಬೆವತು, ಬಿಟ್ಟಿಹುದು.

---

—ರಾಜ್ಯತೃಷ್ಣೆ

ಗಟ್ಟಿಗರು ನೀವುಂಟು. ನಮಗಿಂತ ಗಟ್ಟಿಗರು
ಕಣ್ಣು ಕತ್ತಲೆ ನುಂಗಿ ಆ ಕೂಸು ಕಾಣಿಸದು.
ಈ ಖಡ್ಗ ಕೆಳಗಿಟ್ಟು ಬೇಡುವೆವು ಕ್ಷಮೆಯನ್ನು. (ತಡವರಿಸಿ ನಿಲ್ಲುವರು)

ಓಬಲ:—( ಜರಿಯುವಂತೆ )ಬಿಡಿ ಬಿಡಿರಿ. ಆವ ಗಹನವು ನಮಗೆ ಎಳವಳ್ಳಿ
ಕುಯ್ಯಲದ ಹದನ ಕೈದುಗಳೇಕೆ ? ಕೈಯಿಂದೆ
ಕಿತ್ತುವೆನು. ( ಎಂದು ಆ ಕೂಸನ್ನು ವೇಗದಿಂದ ಮೇಲೆ ತೆಗೆದುಕೊಂಡು ಕತ್ತು ಒತ್ತ ಹತ್ತುವನು. ಆದರ ಚೀರನ್ನು ಕೇಳಿ ಕಟುಕರು ಆಯ್ಯೋ ಎನ್ನುವರು. ಒಬ್ಬನಂತೂ ಮುಖ ಮುಚ್ಚಿಕೊಂಡು ನೆಲಕ್ಕೆ ಬೀಳುವನು. ಇನ್ನೊಬ್ಬನು ನಡುಗುತ್ತಲಿದ್ದ ತನ್ನ ಕೈಗಳನ್ನು ಬಾಯಮೇಲೆ ಹೊಡೆದುಕೊಳ್ಳುವನು. ಮರೆಯಾಗಬೇಕೆಂದು ಅತ್ತ ಇತ್ತ ಓಡಾಡುವನು. ಓಬಲನು ಆ ಕೂಸನ್ನು ನೆಲಕ್ಕೆ ಒಗೆದು ಜಯ ಪಡೆದವರಂತೆ ಆಥ್ಯತೆಯಿಂದ ಮುಂದೆ ಬರಹತ್ತುವನು. ಪರದೆಯು ಮೆಲ್ಲಗೆ ಬೀಳುವದು. )

# ನಮ್ಮ ಮಾಲೆಯಿಂದ ಪ್ರಕಟವಾದ ಪುಸ್ತಕಗಳು.



## ಕಾದಂಬರಿಗಳು.

| | | | |
|---|---|---|---|
| ೧. ಸಂಜೀವಿನಿ | ಲೇ. ಶ್ರೀಕೃಷ್ಣ ಪಾಟೀಲ | ಬೆಲೆ | ೨—೮—೦ |
| ೨. ರಕ್ತಧ್ವನಿ | ಲೇ. ಶ್ರೀರಾಮ ಪಾಟೀಲ | ,, | ೪—೦—೦ |
| ೩. ಚಿದಂಬರ | ಲೇ. ಶ್ರೀಕೃಷ್ಣ ಪಾಟೀಲ | ,, | ೧—೦—೦ |
| ೪. ಸ್ವಪ್ನದರ್ಶನ | ಲೇ. ಶ್ರೀ. ರಘು | ,, | ೧—೧೨—೦ |

## ಕಥಾಸಂಗ್ರಹ.

| | | | |
|---|---|---|---|
| ೫. ವಾಸನಾಭೂತಗಳು | ಲೇ. ಶ್ರೀಕೃಷ್ಣ ಪಾಟೀಲ | ಬೆಲೆ | ೧—೮—೦ |

## ನಾಟಕಗಳು.

| | | | |
|---|---|---|---|
| ೬. ಜನವರಿ ೨೬ | ಲೇ. ಶ್ರೀಕೃಷ್ಣ ಪಾಟೀಲ | ಬೆಲೆ | ೦—೫—೦ |
| ೭. ನಮ್ಮೂರ ನಡತೆ | ಲೇ. ,, | ,, | ೦—೪—೦ |
| ೮. ರಾಜ್ಯತೃಷ್ಣೆ | ಲೇ. ,, | ,, | ೦—೧೨—೦ |

## ಇತರ.

| | | | |
|---|---|---|---|
| ೯. ಒಗಟಗಳು. | | | ೦—೧—೦ |

# ಬರಲಿರುವ ಗ್ರಂಥಗಳು.



೧. ಜ್ವಾಲಾ (ಕಾದಂಬರಿ) ಲೇ. ರಾಜ.

೨. ಬೆಳಗಾವಿಯ ಹುಡುಗ (ಕಾದಂಬರಿ)

೩. ಪ್ರಸಾದ ( ವಚನ ಸಂಗ್ರಹ )

೪. ಜಯಂತ (ಕಾದಂಬರಿ)

೫. ಪ್ರೇಮಯೋಗ. ( ಕಥಾ ಸಂಗ್ರಹ )

**ಇಂದೇ ಚಂದಾದಾರರಾಗಿರಿ.**

ವಾಚನಾಲಯದವರೇ, ಸಾಲೆಯವರೇ ಇಂದೇ ಪುಸ್ತಕಗಳನ್ನು ಕೊಳ್ಳಿರಿ.

ವ್ಯಾಪಾರಸ್ಥರಿಗೆ ಯೋಗ್ಯ ಕಮೀಶನ್ನು ಕೊಡಲಾಗುವದು.

ವಾರ್ಷಿಕ ವರ್ಗಣಿ ಕೇವಲ ೬ ರೂಪಾಯಿ.

**ಸುವರ್ಣ ಭಾರತಿ ಗ್ರಂಥಮಾಲೆ ಬೆಳಗಾವಿ.**



ಜೀವನವು ನಾವು ತಿಳಿದುಕೊಂಡಷ್ಟು ಸುಲಭವಾದುದಲ್ಲ
ನೂರಾರು ವಿಘ್ನಗಳು, ನೂರಾರು ದುಃಖಗಳು
ಸ್ವಾಭಾವಿಕವಾಗಿ ಎದುರಾಗುವವು.

ಅದರಲ್ಲಿ

ತರುಣರ ಜೀವನದಲ್ಲಿ ಹೆಣ್ಣಿನ ಸಮಸ್ಯೆ
ಇನ್ನೂ ಜಟಿಲವಾದುದು.

ಶ್ರೀ. ರಾಜರ

ಇದೇ ಘಟನೆ

# ಜ್ವಾಲಾ! ಜ್ವಾಲಾ!!

ಇದು ನಮ್ಮ ಮಾಲೆಯ ಮುಂದಿನ
ಕಾದಂಬರಿ.